# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| | | |
|---|---|---|
| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜನವರಿ ೧, ೨೦೧೫ (ಪುಷ್ಯ ೧೧, ಶಕ ವರ್ಷ ೧೯೩೬)<br>Bangalore, Thursday, January 1, 2015 (Pushya 11, Shaka Varsha 1936) | ಸಂಚಿಕೆ ೧<br>Issue 1 |

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಹಿಂದುಳಿದ ವರ್ಗಗಳ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ನೀಡುವ ಕಾರ್ಯಕ್ರಮದ ಪರಿಷ್ಕೃತ ಮಾರ್ಗಸೂಚಿಗಳು

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಕಇ 208 ಬಿಎಂಎಸ್ 2010, ದಿನಾಂಕ: 04/09/2010.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 178 ಬಿಎಂಎಸ್ 2012, ದಿನಾಂಕ: 06/06/2012.
3. ಸರ್ಕಾರದ ಆದೇಶ ಸಂಖ್ಯೆ: ಹಿಂವಕ 359 ಬಿಎಂಎಸ್ 2013 ದಿನಾಂಕ:21.12.2013.
4. ಆಯುಕ್ತರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಪ್ರಸ್ತಾವನೆ ಸಂಖ್ಯೆ:ಹಿಂವಕಇ/ಸ-5/ಸಿಆರ್-33/2014-15, ದಿನಾಂಕ: 07.08.2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಆದೇಶದಲ್ಲಿ ಹಿಂದುಳಿದ ವರ್ಗಗಳ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣ ಕಾರ್ಯಕ್ರಮಗಳಿಗೆ ಸಹಾಯಧನ ಮಂಜೂರು ಮಾಡುವ ಕುರಿತು ಮಾರ್ಗಸೂಚಿಗಳಲ್ಲಿ ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಆದೇಶದಲ್ಲಿ ಸಹ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಹಾಯಧನ ಮಂಜೂರು ಮಾಡುವ ಕುರಿತು ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ತದನಂತರ, ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಆದೇಶದಲ್ಲಿ ಸಹ ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡಗಳ ನಿರ್ಮಾಣಕ್ಕಾಗಿ ಸರ್ಕಾರದ ಸಹಾಯಧನ ಮಂಜೂರು ಮಾಡುವ ಕುರಿತು ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ(4)ರಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ರವರು ಪ್ರಸ್ತಾವನೆ ಸಲ್ಲಿಸಿ, ಹಿಂದುಳಿದ ವರ್ಗಗಳ ವಿವಿಧ ಜಾತಿಗಳಿಗೆ ಸೇರಿದ ನೋಂದಾಯಿತ ಸಂಘ-ಸಂಸ್ಥೆಗಳಿಗೆ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಧನ ಸಹಾಯ ಮಂಜೂರಾತಿ ಮಾಡುವ ಕುರಿತು ಹಾಲಿ ಇರುವ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸಲು ಪ್ರಸ್ತಾಪಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಹಿಂದುಳಿದ ವರ್ಗಗಳ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರಾತಿ ನೀಡುವ ಸಂಬಂಧ ಪರಿಷ್ಕೃತ ಮಾರ್ಗಸೂಚಿಗಳನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿದ್ದು ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 695 ಬಿಎಂಎಸ್ 2014 (ಭಾ–2), ದಿನಾಂಕ: 05/11/2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಸಹಾಯಧನ ನೀಡುವ ಕುರಿತು ಮಾರ್ಗಸೂಚಿಗಳನ್ನು ಅನುಬಂಧ–ಅ, ಅನುಬಂಧ–ಆ ಮತ್ತು ಅನುಬಂಧ–ಇ ರಲ್ಲಿ ಲಗತ್ತಿಸಿರುವಂತೆ ಪರಿಷ್ಕರಿಸಿ ಈ ಮಾರ್ಗಸೂಚಿಗಳು ದಿನಾಂಕ:21.12.2013ರಿಂದ ಪೂರ್ವಾನ್ವಯವಾಗುವಂತೆ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಅನುಬಂಧ–ಅ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ, ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಕಾರ್ಯಕ್ರಮದ ಮಾರ್ಗಸೂಚಿಗಳು**

1. **ಉದ್ದೇಶ:–**

ಹಿಂದುಳಿದ ವರ್ಗಗಳ ವಿವಿಧ ಜಾತಿ/ಜನಾಂಗಗಳ ಸಮುದಾಯ ಚಟುವಟಿಕೆಗಳನ್ನು ಹಾಗೂ ವಿದ್ಯಾರ್ಥಿ ನಿಲಯಗಳನ್ನು ನಡೆಸಲು ವಿವಿಧ ಹಿಂದುಳಿದ ವರ್ಗಗಳ ಜಾತಿಗಳಿಗೆ ಸೇರಿದ ಸಂಘ ಸಂಸ್ಥೆಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯಗಳ ಕಟ್ಟಡ ನಿರ್ಮಾಣಕ್ಕೆ ಸರ್ಕಾರದಿಂದ ಅನುದಾನವನ್ನು ಮಂಜೂರು ಮಾಡುವ ಉದ್ದೇಶವನ್ನು ಹೊಂದಿರುತ್ತದೆ.

2. **ಅರ್ಹತೆ:**

ಈ ಕಾರ್ಯಕ್ರಮದಡಿ ಸಹಾಯಧನ ಪಡೆಯಲು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗೆ ಸೇರಿದ ನೋಂದಾಯಿತ ಸಂಘ /ಸ್ವಯಂ ಸೇವಾ ಸಂಸ್ಥೆ / ಟ್ರಸ್ಟ್‌ಗಳು ಅರ್ಹರಿರುತ್ತವೆ.

3. **ಸಹಾಯಧನ ಮಂಜೂರಾತಿಗೆ ಮಾರ್ಗಸೂಚಿಗಳು:**

1. ಸಹಾಯಧನ ಪಡೆಯುವ ಸಂಸ್ಥೆಯು, ಕರ್ನಾಟಕ ಸಂಘ–ಸಂಸ್ಥೆಗಳ ನೋಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ/ನೋಂದಣಿ ನಿಯಮಗಳನ್ವಯ ನೋಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆಯು ನೋಂದಣಿಯಾಗಿ ಕನಿಷ್ಠ 2 ವರ್ಷಗಳಾಗಿರಬೇಕು.
2. ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರಬೇಕು.
3. ಸಹಾಯಧನ ಬಯಸುವ ಸಂಘ ಸಂಸ್ಥೆಗಳು/ಟ್ರಸ್ಟ್‌ಗಳು, ಹಿಂದಿನ 2 ವರ್ಷಗಳ ಆಡಿಟ್ ವರದಿಗಳನ್ನು, ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ಆಡಿಟ್ ಮಾಡಿಸಿ ಅರ್ಜಿಯೊಂದಿಗೆ ಸಲ್ಲಿಸಬೇಕು.
4. ಸಮುದಾಯ ಭವನ/ವಿದ್ಯಾರ್ಥಿನಿಲಯದ ಕಟ್ಟಡದ ನಿರ್ಮಾಣದ ಅನುದಾನ ಬಯಸುವವರು ಅಂದಾಜು ವೆಚ್ಚದ ಕನಿಷ್ಠ 25 ರಷ್ಟು ಮೊತ್ತವನ್ನು ಸ್ವಂತ ಸಂಪನ್ಮೂಲಗಳಿಂದ ಭರಿಸಬೇಕು.
5. ಸಹಾಯಧನ ಬಯಸುವ ಸಂಘ/ಸಂಸ್ಥೆಗಳು/ಟ್ರಸ್ಟ್‌ಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ಸಂಸ್ಥೆಯ ಹೆಸರಿನಲ್ಲಿ ಜಮೀನು/ನಿವೇಶನವನ್ನು ಹೊಂದಿರಬೇಕು ಅಥವಾ ಸರ್ಕಾರಿ/ ಸರ್ಕಾರೇತರ ಸಂಸ್ಥೆಗಳಿಂದ ಕನಿಷ್ಠ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆಗೆ (ಲೀಸ್) ಪಡೆದಿರಬೇಕು.
6. ಕಟ್ಟಡದ ನೀಲ ನಕ್ಷೆಗೆ ಸ್ಥಳೀಯ ಮಹಾನಗರಪಾಲಿಕೆ/ನಗರಸಭೆ / ಪುರಸಭೆ / ಗ್ರಾಮ ಪಂಚಾಯ್ತಿಯಿಂದ ಅನುಮೋದನೆ ಪಡೆದಿರಬೇಕು ಮತ್ತು ಕಟ್ಟಡ ನಿರ್ಮಿಸಲು ಪರವಾನಿಗೆಯನ್ನು ಪಡೆದಿರಬೇಕು
7. ಉದ್ದೇಶಿತ ಕಟ್ಟಡದ ಅಂದಾಜು ಪಟ್ಟಿಯನ್ನು ಸರ್ಕಾರದ ಇಲಾಖೆ/ಸಂಸ್ಥೆಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು/ಕಾರ್ಯಪಾಲಕ ಅಭಿಯಂತರರು ಅಥವಾ ಅಂಗೀಕೃತ ಅಭಿಯಂತರರಿಂದ ಅಥವಾ ಅಂಗೀಕೃತ ವಾಸ್ತುಶಿಲ್ಪಿಗಳಿಂದ ಅನುಮೋದಿಸಲ್ಪಟ್ಟಿರಬೇಕು.
8. ಈ ಕೆಳಗಿನ ಪ್ರದೇಶಗಳಲ್ಲಿ ನಿರ್ಮಿಸುವ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡಗಳಿಗೆ ಅನುದಾನದ ಗರಿಷ್ಠ ಮಿತಿಯನ್ನು ಕೆಳಕಂಡಂತೆ ನಿಗದಿಪಡಿಸಿದೆ.

| ಕ್ರ ಸಂ | ಸ್ಥಳ | ಗರಿಷ್ಠ ಸಹಾಯಧನ |
|---|---|---|
| 1 | ಗ್ರಾಮ ಪಂಚಾಯಿತಿ /ಪಟ್ಟಣ ಪಂಚಾಯಿತಿ | ರೂ.10.00 ಲಕ್ಷ |
| 2 | ತಾಲ್ಲೂಕು ಕೇಂದ್ರ ಸ್ಥಾನ, | ರೂ.25.00 ಲಕ್ಷ |
| 3 | ಜಿಲ್ಲಾ ಕೇಂದ್ರಸ್ಥಾನ | ರೂ.50.00 ಲಕ್ಷ |

**ಮೇಲ್ಕಂಡ ಗರಿಷ್ಠ ಸಹಾಯಧನ ಮೊತ್ತವನ್ನು ಸಡಿಲಗೊಳಿಸಿ ಹೆಚ್ಚಿನ ಮೊತ್ತವನ್ನು ಮಂಜೂರು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.**

9. ಸಹಾಯಧನ ಪಡೆಯಲಿಚ್ಚಿಸುವ ಸಂಸ್ಥೆಗಳು / ಟ್ರಸ್ಟ್‌ಗಳು **ಅನುಬಂಧ–ಆ** ರ ಅರ್ಜಿ ನಮೂನೆಯಲ್ಲಿ ನಿಗದಿತ ದಾಖಲಾತಿಯೊಂದಿಗೆ, ಅರ್ಜಿಯನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

10. ಒಂದು ಸಂಘ ಅಥವಾ ಸಂಸ್ಥೆಯು ಈ ಕಾರ್ಯಕ್ರಮದಡಿ ಇಲಾಖೆಯಿಂದ ಒಂದು ಸ್ಥಳದಲ್ಲಿ ಒಂದು ಬಾರಿ ಕಟ್ಟಡ ನಿರ್ಮಾಣ ಮಾಡಲು ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತದೆ.

11. ಸಹಾಯಧನದ ಮಂಜೂರಾತಿ ಆದೇಶ ನೀಡಿದ ಕೂಡಲೇ ಸಂಸ್ಥೆಯು **ಅನುಬಂಧ–ಈ** ರಲ್ಲಿರುವಂತೆ ಕನಿಷ್ಠ ರೂ.100/– ರ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಸಂಬಂಧಿಸಿದ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗೆ ಸಲ್ಲಿಸಬೇಕು.

12. ಮಂಜೂರು ಮಾಡಿದ ಸಹಾಯಧನವನ್ನು ಒಂದೇ ಕಂತಿನಲ್ಲಿ ಸಂಬಂಧಿಸಿದ ಜಿಲ್ಲಾಧಿಕಾರಿಗಳ ಪಿ.ಡಿ ಖಾತೆ/ಇತರೆ ಖಾತೆಗಳಿಗೆ ಬಿಡುಗಡೆ ಮಾಡುವುದು.

13. ಸರ್ಕಾರದಿಂದ ನೇರವಾಗಿ ಸಹಾಯಧನ ಮಂಜೂರಾದ ಪ್ರಕರಣಗಳಲ್ಲಿ ಮಾರ್ಗಸೂಚಿಯಲ್ಲಿರುವ ದಾಖಲಾತಿಗಳನ್ನು ಆಯಾ ಜಿಲ್ಲಾಧಿಕಾರಿಗಳು, ಸಂಸ್ಥೆಗಳಿಂದ ಪಡೆದು ಹಣ ಬಿಡುಗಡೆ ಮಾಡುವುದು.

14. ಸಂಬಂಧಿಸಿದ ಸಂಸ್ಥೆಗೆ, ಕಟ್ಟಡದ ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಜಿಲ್ಲಾಧಿಕಾರಿಗಳ ಹಂತದಲ್ಲಿಯೇ ಮೂರು ಕಂತುಗಳಲ್ಲಿ ಸಹಾಯಧನವನ್ನು 25:50:25ರ ಅನುಪಾತದಂತೆ ಬಿಡುಗಡೆ ಮಾಡುವುದು. (ಮಂಜೂರಾತಿ ಆದೇಶದೊಂದಿಗೆ, ಮೇಲ್ಛಾವಣಿ ಹಂತ ಮತ್ತು ಮುಕ್ತಾಯದ ಹಂತ)

15. ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ನಾಲ್ಕು ತಿಂಗಳುಗಳೊಳಗಾಗಿ ಕಟ್ಟಡದ ಕಾಮಗಾರಿಯನ್ನು ಸಂಸ್ಥೆ ಪ್ರಾರಂಭಿಸದಿದ್ದಲ್ಲಿ, ಬಿಡುಗಡೆ ಮಾಡಲಾಗಿರುವ ಪೂರ್ಣ ಮೊತ್ತವನ್ನು ಸಂಸ್ಥೆಯಿಂದ ಜಿಲ್ಲಾಧಿಕಾರಿಗಳು ಹಿಂದಕ್ಕೆ ಪಡೆಯತಕ್ಕದ್ದು.

16. ಕಟ್ಟಡ ನಿರ್ಮಾಣಕ್ಕೆ, ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಮೂರು ವರ್ಷಗಳೊಳಗಾಗಿ, ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು. ಮೂರು ವರ್ಷಗಳೊಳಗಾಗಿ ಕಟ್ಟಡವನ್ನು ಪೂರ್ಣಗೊಳಿಸದಿದ್ದಲ್ಲಿ ಅದುವರೆಗೆ ಮಂಜೂರು ಮಾಡಿದ ಮೊತ್ತವನ್ನು ಮತ್ತು ಅದರ ಮೇಲೆ ಶೇ.10ರಷ್ಟು ಬಡ್ಡಿಯನ್ನು ಸದರಿ ಸಂಸ್ಥೆಯಿಂದ ವಸೂಲು ಮಾಡಲಾಗುವುದು. ಆದರೆ, ಸಂಸ್ಥೆಯು ನೀಡುವ ವಿವರಣೆಯನ್ನು ಪರಿಶೀಲಿಸಿ, ಕಟ್ಟಡ ನಿರ್ಮಾಣಕ್ಕೆ ಹೆಚ್ಚುವರಿ ಕಾಲಾವಕಾಶವನ್ನು, ಆಯುಕ್ತರು/ನಿರ್ದೇಶಕರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ನೀಡಬಹುದು. ಆದರೆ ಇದು ಒಟ್ಟಾರೆ 4 ವರ್ಷಗಳಿಗೆ ಮೀರಬಾರದು.

17. ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಕಟ್ಟಡದ ಕಾಮಗಾರಿಯ ಆರ್ಥಿಕ ಮತ್ತು ಭೌತಿಕ ಪ್ರಗತಿಯ ಬಗ್ಗೆ ವರದಿಯನ್ನು 8 ವಿವಿಧ ಕೋನಗಳಿಂದ ತೆಗೆದ ಛಾಯಾಚಿತ್ರಗಳನ್ನು ಆಧರಿಸಿ ಜಿಲ್ಲಾಧಿಕಾರಿಗಳು ಹಣ ಬಿಡುಗಡೆ ಮಾಡುವುದು.

18. ಸರ್ಕಾರದ ಅನುದಾನ ಪಡೆದು ನಿರ್ಮಿಸುವ ವಿದ್ಯಾರ್ಥಿ ನಿಲಯದ ಕಟ್ಟಡವನ್ನು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಉಪಯೋಗಕ್ಕೆ ಮಾತ್ರ ಬಳಸತಕ್ಕದ್ದು.

19. ಈ ಕಾರ್ಯಕ್ರಮದಡಿ ಸರ್ಕಾರದ ಸಹಾಯಧನ ಪಡೆದು ನಿರ್ಮಿಸುವ ಕಟ್ಟಡವನ್ನು ಯಾವುದೇ ರಾಜಕೀಯ ಉದ್ದೇಶಗಳಿಗೆ ಬಳಸತಕ್ಕದ್ದಲ್ಲ.

20. ನಿರ್ಮಾಣ ಮಾಡಿರುವ ಕಟ್ಟಡವನ್ನು ಸಂಘ/ ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಮಾತ್ರ ಬಳಸಬೇಕು.

21. ವಿದ್ಯಾರ್ಥಿ ನಿಲಯ/ಸಮುದಾಯ ಭವನ ಕಟ್ಟಡವನ್ನು ನಿರ್ಮಾಣದ ನಂತರ, ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಲ್ಲಿ, ಇಲಾಖೆಯು ಸದರಿ ಸಮುದಾಯ ಭವನ /ವಿದ್ಯಾರ್ಥಿ ನಿಲಯವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿರುತ್ತದೆ.

**22.** ಸಮುದಾಯ ಭವನಗಳನ್ನು ನಿರ್ಮಿಸಲು ಹಿಂದುಳಿದ ವರ್ಗಗಳ ಅನುಕೂಲಕ್ಕೋಸ್ಕರ ಅವಶ್ಯಕತೆ ಇರುವ ಗ್ರಾಮಗಳಲ್ಲಿ/ಸ್ಥಳಗಳಲ್ಲಿ ನೋಂದಾಯಿತ ಸಂಘ/ಸ್ವಯಂಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ಮುಂದೆ ಬಾರದೆ ಇದ್ದಲ್ಲಿ, ಅಥವಾ ಸಂಸ್ಥೆಗಳು ಇಲ್ಲದಿದ್ದಲ್ಲಿ, **ಹಿಂದುಳಿದ ವರ್ಗಗಳ ಸಮುದಾಯ ಭವನಗಳು** ಆ ಗ್ರಾಮಗಳಲ್ಲಿ ಅವಶ್ಯಕತೆ ಇದ್ದಲ್ಲಿ, ಅಂತಹ ಗ್ರಾಮಗಳಲ್ಲಿ ಸಮುದಾಯ ಭವನ ನಿರ್ಮಾಣ ಮಾಡಲು ಸರ್ಕಾರಿ/ಗ್ರಾಮ ಪಂಚಾಯ್ತಿ ನಿವೇಶನವಿದ್ದಲ್ಲಿ, ಸಮುದಾಯ ಭವನಗಳನ್ನು ನಿರ್ಮಿತಿ ಕೇಂದ್ರ/ಕೆ.ಆರ್.ಐ.ಡಿ.ಎಲ್/ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಇತ್ಯಾದಿ ಸರ್ಕಾರಿ ಅಂಗ ಸಂಸ್ಥೆ/ಇಲಾಖೆಗಳ ಮುಖಾಂತರ ನಿರ್ಮಾಣ ಮಾಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ. ಈ ರೀತಿ ನಿರ್ಮಾಣ ಮಾಡಲಾದ ಸಮುದಾಯ ಭವನಗಳನ್ನು ಗ್ರಾಮ ಪಂಚಾಯ್ತಿ, ಪಟ್ಟಣ ಪಂಚಾಯ್ತಿ/ಪುರಸಭೆ/ನಗರಸಭೆ/ಮಹಾನಗರ ಪಾಲಿಕೆಗಳ ವಶಕ್ಕೆ ನೀಡುವುದು. ಈ ಸ್ಥಳೀಯ ಸಂಸ್ಥೆಗಳು ಇದರ ಉಸ್ತುವಾರಿ ಮಾಡುವುದು ಹಾಗೂ ಹಿಂದುಳಿದ ವರ್ಗಗಳ ಸಮುದಾಯದ ಚಟುವಟಿಕೆಗಳಿಗೆ ಉಪಯೋಗಿಸುವುದು. ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಜಿಲ್ಲಾಧಿಕಾರಿಗಳ ಮುಖಾಂತರ ಈ ಬಗ್ಗೆ ಪ್ರಸ್ತಾವನೆ ಬಂದಲ್ಲಿ, ಅಂತಹ ಪ್ರಸ್ತಾವನೆಗಳನ್ನು ಪರಿಶೀಲಿಸಿ, ಮಂಜೂರಾತಿ ನೀಡಿ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಹಣ ಬಿಡುಗಡೆ ಮಾಡುವುದು. ಇಲಾಖೆ/ಜಿಲ್ಲಾಧಿಕಾರಿಗಳ ಮುಖಾಂತರ ನಿರ್ಮಾಣ ಮಾಡುವ ಸಮುದಾಯ ಭವನಗಳಿಗೆ ಅಂದಾಜು ವೆಚ್ಚದ ಪೂರ್ಣ ಮೊತ್ತವನ್ನು ಸರ್ಕಾರದ ವತಿಯಿಂದ ಭರಿಸುವುದು.

**23.** ಈ ಕಾರ್ಯಕ್ರಮದಡಿ ಆಯವ್ಯಯದಲ್ಲಿ ಹಂಚಿಕೆಯಾದ ಅನುದಾನದ ಶೇ.70ನ್ನು ಪ್ರವರ್ಗ–1 ಹಾಗೂ 2ಎ ಸಮುದಾಯಕ್ಕೆ ಮತ್ತು ಶೇ.30ನ್ನು ಪ್ರವರ್ಗ–3ಎ ಹಾಗೂ 3ಬಿ ಸಮುದಾಯಕ್ಕೆ ಹಂಚಿಕೆ ಮಾಡುವುದು. ವಿಶೇಷ ಸಂದರ್ಭದಲ್ಲಿ ಸರ್ಕಾರದ ಪೂರ್ವಾನುಮೋದನೆ ಪಡೆದು ಹೆಚ್ಚುವರಿ ಹಂಚಿಕೆ ಮಾಡಬಹುದಾಗಿದೆ.

**4. ಇಲಾಖಾ ಅಧಿಕಾರಿಗಳಿಗೆ ಸೂಚನೆಗಳು:**

1. **ಈ ಕೆಳಗೆ ನಮೂದಿಸಿರುವ ಸಹಾಯಧನವನ್ನು ಮಂಜೂರು ಮಾಡುವ ಅಧಿಕಾರವನ್ನು ಈ ಕೆಳಗಿನಂತೆ ವಹಿಸಲಾಗಿದೆ.**

   (ಅ) **ರೂ.10.00ಲಕ್ಷಗಳವರೆಗೆ – ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

   (ಆ) **ರೂ.10.00ಲಕ್ಷಗಳಿಗಿಂತ ಮೇಲ್ಪಟ್ಟು – ರಾಜ್ಯ ಸರ್ಕಾರ**

2. ಸಂಘ/ಸಂಸ್ಥೆಗಳು ಜಿಲ್ಲಾ ಮಟ್ಟದಲ್ಲಿ ಸಲ್ಲಿಸುವ ಪ್ರಸ್ತಾವನೆಗಳಿಗೆ ಸಂಬಂಧಿಸಿದಂತೆ, ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಸ್ಥಳ ಪರಿಶೀಲನೆ ಮಾಡಿ ಅವರ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು (ಚೆಕ್‌ಲಿಸ್ಟ್ ನಮೂನೆಯೊಂದಿಗೆ) ಸಂಬಂಧಿಸಿದ ಜಿಲ್ಲಾಧಿಕಾರಿಗಳ ಮೂಲಕ ಪ್ರಸ್ತಾವನೆಯನ್ನು ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ, ಸಲ್ಲಿಸಬೇಕು. ಆಯುಕ್ತರು/ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆಯನ್ನು ಪರಿಶೀಲಿಸಿ ಅವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರ ಪರಿಮಿತಿಯೊಳಗೆ ಸಹಾಯಧನವನ್ನು ಮಂಜೂರು ಮಾಡಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವುದು. ಆಯುಕ್ತರಿಗೆ ದತ್ತವಾದ ಆರ್ಥಿಕ ಮಿತಿ ಮೀರಿದ್ದಲ್ಲಿ ಅಂತಹ ಪ್ರಸ್ತಾವನೆಗಳನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸುವುದು.

3. ಸರ್ಕಾರದಿಂದ ಬಿಡುಗಡೆಯಾದ ಅನುದಾವನ್ನು ಸದ್ಬಳಕೆ ಮಾಡಿಕೊಂಡು ಕಟ್ಟಡವನ್ನು ನಿಗದಿತ ಅವಧಿಯಲ್ಲಿ ಮುಕ್ತಾಯಗೊಳಿಸುವಂತೆ ನೋಡಿಕೊಳ್ಳುವ ಜವಾಬ್ದಾರಿ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸೇರಿರುತ್ತದೆ. ಸಂಸ್ಥೆಯವರು ಮಾರ್ಗಸೂಚಿಗಳಿಗೆ ವಿರುದ್ಧವಾಗಿ ನಡೆದುಕೊಂಡ ಸಂದರ್ಭದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ವರದಿ ಮಾಡುವುದು ಹಾಗೂ ಮುಂದಿನ ಕ್ರಮ ವಹಿಸುವುದು.

4. ಈ ಮಾರ್ಗಸೂಚಿಗಳು 2013–14ನೇ ಸಾಲಿನಲ್ಲಿ ಸರ್ಕಾರದ ಆದೇಶ ಸಂಖ್ಯೆ: ಬಿಸಿಡಬ್ಲ್ಯೂ 170 ಬಿಎಂಎಸ್ 2014 ದಿನಾಂಕ: 19/02/2014, ಸರ್ಕಾರದ ಆದೇಶ ಸಂಖ್ಯೆ: ಬಿಸಿಡಬ್ಲ್ಯೂ 170 ಬಿಎಂಎಸ್ 2014 ದಿನಾಂಕ:26/02/2014 ಮತ್ತು ಸರ್ಕಾರದ ಆದೇಶ ಸಂಖ್ಯೆ: ಬಿಸಿಡಬ್ಲ್ಯೂ 206 ಬಿಎಂಎಸ್ 2014 ದಿನಾಂಕ: 04/03/2014 ರಲ್ಲಿ ಬಿಡುಗಡೆ ಮಾಡಿರುವ ಸಮುದಾಯ ಭವನ/ವಿದ್ಯಾರ್ಥಿನಿಲಯಗಳಿಗೆ ಕೂಡಾ ಪೂರ್ವಾನ್ವಯವಾಗಿ ಅನ್ವಯಿಸುತ್ತದೆ.

**ಎನ್.ಆರ್. ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**ಅನುಬಂಧ–ಆ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**(ಸರ್ಕಾರದ ಆದೇಶ ಸಂಖ್ಯೆ:ಹಿಂವಕ 695 ಬಿಎಂಎಸ್ 2014(ಭಾ–2), ದಿನಾಂಕ:05/11/2014 ರಂತೆ)**

**ಹಿಂದುಳಿದ ವರ್ಗಗಳ ವಿವಿಧ ಸಮುದಾಯಗಳಿಗೆ ಸಮುದಾಯ ಭವನ/ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಪಡೆಯಲು ಅರ್ಜಿ**

**ಗೆ:**

**ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ**

. . . . . . . . . . . . . . **ಜಿಲ್ಲೆ.**

| | | |
|---|---|---|
| 1 | ಸಂಸ್ಥೆಯ ಹೆಸರು ಮತ್ತು ಪೂರ್ಣ ವಿಳಾಸ: ದೂರವಾಣಿ ಸಂಖ್ಯೆ: | |
| 2 | ಸಂಸ್ಥೆಯು ಹಿಂದುಳಿದ ವರ್ಗಗಳ ಯಾವ ಪ್ರವರ್ಗ/ಜಾತಿಗೆ ಸೇರಿರುತ್ತದೆ. | |
| 3 | ಸಂಸ್ಥೆಯ ನೋಂದಣಿ ಆದೇಶ ಸಂಖ್ಯೆ ಮತ್ತು ದಿನಾಂಕ | |
| 4 | ಸಂಸ್ಥೆಯು ನೋಂದಾಯಿತ ಬೈಲಾ ಪ್ರತಿಯನ್ನು ಲಗತ್ತಿಸಿದೆಯೇ | |
| 5 | ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಅಧ್ಯಕ್ಷರು ಹಾಗೂ ಸದಸ್ಯರ ಪಟ್ಟಿ ಮತ್ತು ವಿಳಾಸದ ವಿವರಗಳನ್ನು ಲಗತ್ತಿಸಿದೆಯೇ | |
| 6 | ಸಂಸ್ಥೆಯು ಈ ಹಿಂದೆ ಈ ಉದ್ದೇಶಕ್ಕಾಗಿ ರಾಜ್ಯ/ಕೇಂದ್ರ ಸರ್ಕಾರ ಅಥವಾ ಅರೆ ಸರ್ಕಾರಿ ಸಂಸ್ಥೆಗಳಿಂದ ಸಹಾಯಧನ ಪಡೆದಿದ್ದಲ್ಲಿ ವಿವರ ನೀಡುವುದು. | |
| 7 | ಸಹಾಯಧನ ಕೋರಿರುವ ಉದ್ದೇಶ ಸಮುದಾಯಭವನ/ ವಿದ್ಯಾರ್ಥಿ ನಿಲಯ | |
| 8 | ಕಟ್ಟಡ ನಿರ್ಮಾಣ ಮಾಡಲು ಸಂಸ್ಥೆ ಹೊಂದಿರುವ ನಿವೇಶನ/ಜಮೀನಿನ ವಿವರ ನೀಡುವುದು | |
| 9 | ಪ್ರಸ್ತಾಪಿತ ಕಟ್ಟಡದ ಅಂದಾಜುಪಟ್ಟಿಯನ್ನು ಸರ್ಕಾರದ ಸಂಸ್ಥೆಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು/ಕಾರ್ಯಪಾಲಕ ಅಭಿಯಂತರರು ಅಥವಾ ಅಂಗೀಕೃತ ಅಭಿಯಂತರರಿಂದ ಅಥವಾ ಅಂಗೀಕೃತ ವಾಸ್ತುಶಿಲ್ಪಿಗಳಿಂದ ಅನುಮೋದಿಸಲ್ಪಟ್ಟಿರುವ ಬಗ್ಗೆ ದಾಖಲೆ ಲಗತ್ತಿಸುವುದು. | |
| **10** | ಪ್ರಸ್ತಾಪಿಸಿದ ಕಟ್ಟಡ ನಿರ್ಮಿಸಲು **ಸ್ಥಳೀಯ ಸಂಸ್ಥೆಗಳಿಂದ** ನಕ್ಷೆ ಅನುಮೋದಿಸಿದ ಬಗ್ಗೆ ಹಾಗೂ ಕಟ್ಟಡ ನಿರ್ಮಿಸಲು ಪರವಾನಗಿ ಪಡೆದಿರುವ ಬಗ್ಗೆ ದಾಖಲಾತಿಗಳನ್ನು ಲಗತ್ತಿಸುವುದು. | |

| | | |
|---|---|---|
| **11** | ಕಟ್ಟಡ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಸರ್ಕಾರದ ಸಹಾಯಧನ ಹೊರತುಪಡಿಸಿ ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರಗಳನ್ನು ನೀಡುವುದು. | |
| **12** | ಸಂಸ್ಥೆಯು ಕಳೆದ 2 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿಯನ್ನು ಲಗತ್ತಿಸುವುದು. | |

ಸರ್ಕಾರ ಈ ಸಂಬಂಧ ಹೊರಡಿಸಿರುವ ಮಾರ್ಗಸೂಚಿಗಳನ್ನು ತಿಳಿದುಕೊಂಡಿರುತ್ತೇನೆ. ಈ ಮೇಲೆ ನಮೂದಿಸಲಾದ ವಿವರಗಳು ಸತ್ಯವಾಗಿರುತ್ತವೆ. ನಮ್ಮ ಸಂಸ್ಥೆಗೆ ಸಹಾಯಧನ ಮಂಜೂರು ಮಾಡಿದಲ್ಲಿ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು, ಜಿಲ್ಲೆಯ ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಲು ಬದ್ದನಾಗಿರುತ್ತೇನೆ. ಆದ ಕಾರಣ ಈ ಮೇಲಿನ ಉದ್ದೇಶಕ್ಕಾಗಿ ನಮ್ಮ ಸಂಸ್ಥೆಗೆ ರೂ. . . . . . . . . . . . . . . . . . . . . . . . . . . ಗಳ ಸಹಾಯಧನ ಮಂಜೂರು ಮಾಡಬೇಕೆಂದು ಕೋರುತ್ತೇನೆ.

**ಸೂಚನೆ:**

**ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಂದ ಸ್ವಯಂ ದೃಢೀಕರಿಸಿದ ಈ ಕೆಳಕಂಡ ದಾಖಲೆಗಳನ್ನು ಸಲ್ಲಿಸಬೇಕು.**

1. ಸಂಸ್ಥೆಯ ನೋಂದಣಿ ಪತ್ರ ಮತ್ತು ಬೈಲಾ ಪ್ರತಿ.
2. ಸಂಸ್ಥೆಯ ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸ
3. ಸರ್ಕಾರದಿಂದ ಸಹಾಯಧನ ಪಡೆಯುವ ಬಗ್ಗೆ ಸಂಸ್ಥೆಯ ಸಭೆಯಲ್ಲಿ ಚರ್ಚಿಸಿ ಸರ್ವಾನುಮತದಿಂದ ತೀರ್ಮಾನಿಸಿದ ನಡವಳಿಗಳು
4. ಸಂಸ್ಥೆಯ ಹೆಸರಿನಲ್ಲಿರುವ ನಿವೇಶನ/ಜಮೀನಿನ ಕ್ರಯಪತ್ರ ಹಾಗೂ ಖಾತಾ ಪತ್ರ ಅಥವಾ ಗುತ್ತಿಗೆ ಪಡೆದಿದ್ದಲ್ಲಿ ಗುತ್ತಿಗೆ ಪತ್ರ (Lease Deed)
5. ನಿವೇಶನಕ್ಕೆ ಸಂಬಂಧಿಸಿದ ಕಳೆದ 12 ವರ್ಷಗಳ ಋಣಭಾರ ಪತ್ರ
6. ಸಂಸ್ಥೆಯ ಕಳೆದ 2 ವರ್ಷಗಳ ಆಡಿಟ್ ವರದಿ (ಚಾರ್ಟೆಡ್ ಅಕೌಂಟೆಂಟ್ ದೃಢೀಕರಿಸಿರಬೇಕು)
7. ಸ್ಥಳೀಯ ಸಂಸ್ಥೆಗಳಿಂದ ಅನುಮೋದಿತ ಕಟ್ಟಡದ ನೀಲಿ ನಕ್ಷೆ ಹಾಗೂ ಕಟ್ಟಡ ನಿರ್ಮಿಸಲು ಪರವಾನಗಿ (ಮೂಲ ಪ್ರತಿ)
8. ಪ್ರಸ್ತಾಪಿತ ಕಟ್ಟಡದ ಅಂದಾಜು ಪಟ್ಟಿಯನ್ನು ಸರ್ಕಾರದ ಸಂಸ್ಥೆಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು/ಕಾರ್ಯಪಾಲಕ ಅಭಿಯಂತರರು ಅಥವಾ ಅಂಗೀಕೃತ ಅಭಿಯಂತರರಿಂದ ಅಥವಾ ಅಂಗೀಕೃತ ವಾಸ್ತುಶಿಲ್ಪಿಗಳಿಂದ ಅನುಮೋದಿಸಲ್ಪಟ್ಟಿರುವ ಬಗ್ಗೆ ದಾಖಲೆ ಲಗತ್ತಿಸುವುದು.
9. ಕಟ್ಟಡ ನಿರ್ಮಾಣದ ಒಟ್ಟು ವೆಚ್ಚದಲ್ಲಿ ಸರ್ಕಾರದ ಅನುದಾನದ ಹೊರತು ಪಡಿಸಿ ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರಗಳು ಛಾಪಾ ಕಾಗದದಲ್ಲಿ ಮುಚ್ಚಳಿಕೆ ಪತ್ರ ಸಲ್ಲಿಸುವುದು

**ದಿನಾಂಕ:** **ಸಹಿ:**

**ಸ್ಥಳ :** **ಅಧ್ಯಕ್ಷರು**

**ಕಛೇರಿ ಉಪಯೋಗಕ್ಕಾಗಿ**

ಕಡತ ಸಂಖ್ಯೆ: **ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ,.**

. . . . . . . . . **ಜಿಲ್ಲೆ, ದಿನಾಂಕ:.** . . . .

| |
|---|
| ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಸ್ಥಳ ತನಿಖಾ ವರದಿ ಮತ್ತು ಶಿಫಾರಸ್ಸು<br><br>**ಸಹಿ:**<br>**ಜಿಲ್ಲಾ ಹಿಂದುಳಿದ**<br>**ವರ್ಗಗಳ ಕಲ್ಯಾಣಾಧಿಕಾರಿ** |

**ಅನುಬಂಧ–ಇ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿವಿಧ ಸಮುದಾಯಗಳಿಗೆ, ಸಮುದಾಯ ಭವನ/ವಿದ್ಯಾರ್ಥಿ ನಿಲಯ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಪಡೆಯಲು ಸಲ್ಲಿಸಬೇಕಾದ**

**ಕರಾರು ಪತ್ರ**

ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು, . . . . . ಜಿಲ್ಲೆ ಇವರಿಗೆ, ಅಧ್ಯಕ್ಷರು /ಕಾರ್ಯದರ್ಶಿಗಳು . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . . .( ಸಂಘ/ಸಂಸ್ಥೆಯ ಹೆಸರು ಮತ್ತು ವಿಳಾಸ) ಆದ ನಾವು . . . . . . . . . . ಜಿಲ್ಲೆಯ . . . . . . . . . . ತಾಲ್ಲೂಕಿನ . . . . . . . . . . ಗ್ರಾಮದಲ್ಲಿ ಸಮುದಾಯ ಭವನ/ವಿದ್ಯಾರ್ಥಿ ನಿಲಯದ ಕಟ್ಟಡ ನಿರ್ಮಾಣ ಮಾಡಲು ಸರ್ಕಾರದ ಸಹಾಯಧನಕ್ಕಾಗಿ ಅರ್ಜಿ ಸಲ್ಲಿಸಿದ್ದು, ಸರ್ಕಾರ/ಆಯುಕ್ತರು ಈ ಉದ್ದೇಶಕ್ಕಾಗಿ ರೂ. . . . . . . ಲಕ್ಷಗಳ ಸಹಾಯಧನವನ್ನು ಆದೇಶ ಸಂಖ್ಯೆ:. . . . . . . . . . . . . . . . . . . . , ದಿನಾಂಕ:. . . . . . . . . ರಂತೆ ಮಂಜೂರು ಮಾಡಿರುತ್ತಾರೆ. , ಸರ್ಕಾರದ ಆದೇಶದ (ಮಾರ್ಗಸೂಚಿ) ಪ್ರಕಾರ ನಾವು ಈ ಕೆಳಗಿನಂತೆ ಪ್ರಮಾಣ ಪತ್ರವನ್ನು ಸಲ್ಲಿಸುತ್ತಿದ್ದೇವೆ.

1. ನಮ್ಮ ಸಂಸ್ಥೆಯು ಹಿಂದುಳಿದ ವರ್ಗಗಳ ಪ್ರವರ್ಗ– . . . . . . ರ . . . . . ಜಾತಿಗೆ ಸೇರಿದ್ದಾಗಿರುತ್ತದೆ.
2. ನಮ್ಮ ಸಂಸ್ಥೆಯ ಕಾರ್ಯಕಾರಿ ಸಮಿತಿಯ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿದವರಾಗಿರುತ್ತಾರೆ.
3. ನಮ್ಮ ಸಂಸ್ಥೆಗೆ, ಕಟ್ಟಡ ನಿರ್ಮಾಣಕ್ಕೆ, ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಮೂರು ವರ್ಷಗಳೊಳಗಾಗಿ, ನಿರ್ಮಾಣವನ್ನು ಪೂರ್ಣಗೊಳಿಸುತ್ತೇವೆ. ಮೂರು ವರ್ಷಗಳೊಳಗಾಗಿ ಕಟ್ಟಡವನ್ನು ಪೂರ್ಣಗೊಳಿಸದಿದ್ದಲ್ಲಿ ಅದುವರೆಗೆ ಸರ್ಕಾರ ಮಂಜೂರು ಮಾಡಿದ ಮೊತ್ತವನ್ನು ಮತ್ತು ಅದರ ಮೇಲೆ ಶೇ.10 ರಷ್ಟು ಬಡ್ಡಿಯನ್ನು ನಮ್ಮ ಸಂಸ್ಥೆಯಿಂದ ಸರ್ಕಾರ ವಸೂಲು ಮಾಡಬಹುದು.
4. ಈ ಕಟ್ಟಡಗಳನ್ನು ಸಮುದಾಯದ ಪೂರಕ ಚಟುವಟಿಕೆಗಳಿಗೆ ಮಾತ್ರ ಉಪಯೋಗಿಸಲಾಗುವುದು. ಯಾವುದೇ ರಾಜಕೀಯ ಚಟುವಟಿಕೆಗಳಿಗೆ ಉಪಯೋಗಿಸುವುದಿಲ್ಲ.
5. ಸಂಘ/ ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಮಾತ್ರ ಕಟ್ಟಡವನ್ನು ಬಳಸಲಾಗುವುದು.
6. ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಕಟ್ಟಡವನ್ನು ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಲ್ಲಿ ಇಲಾಖೆಯು ಸದರಿ ಸಮುದಾಯ ಭವನ/ವಿದ್ಯಾರ್ಥಿ ನಿಲಯವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು.
7. ಅನುದಾನ ಮಂಜೂರಾತಿ ಆದೇಶದಲ್ಲಿ ವಿಧಿಸಿರುವ ಎಲ್ಲಾ ಷರತ್ತುಗಳ ಪಾಲನೆಗೆ ಬದ್ಧರಾಗಿರುತ್ತವೆ.
8. ಈ ಪ್ರಮಾಣ ಪತ್ರದ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಸಂಘದ/ಸಂಸ್ಥೆಯ ವಿರುದ್ಧ ಕಾನೂನಿನ ರೀತ್ಯಾ ಕ್ರಮ ತೆಗೆದುಕೊಳ್ಳಬಹುದು.

ದಿನಾಂಕ: ಸಹಿ: ಸಹಿ:

ಹೆಸರು: ಹೆಸರು:

(ಸಂಸ್ಥೆಯ ಅಧ್ಯಕ್ಷರ) (ಸಂಸ್ಥೆಯ ಕಾರ್ಯದರ್ಶಿ)

(ಮೊಹರಿನೊಂದಿಗೆ) (ಮೊಹರಿನೊಂದಿಗೆ)

(ನೋಟರಿಯಿಂದ ಪ್ರಮಾಣೀಕರಿಸಿರಬೇಕು)

**ಚೆಕ್ ಲಿಸ್ಟ್:–**

**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಅನುದಾನ ಮಂಜೂರು ಮಾಡುವುದಕ್ಕೆ ಸಂಬಂಧಿಸಿದಂತೆ ತಡೆಪಟ್ಟಿ**

**ಸಂಸ್ಥೆಯ ಹೆಸರು ಮತ್ತು ವಿಳಾಸ;**

| | ವಿವರಗಳು | ಲಗತ್ತಿಸಲಾಗಿದೆಯೇ? | ವ್ಯವಹಾರದ ಪುಟ ಸಂಖ್ಯೆ |
|---|---|---|---|
| 1 | ಸಂಸ್ಥೆಯು ಯಾವ ಜಾತಿ/ಪ್ರವರ್ಗ ಸೇರಿದೇ ಎಂಬ ಬಗ್ಗೆ ನಮೂದಿಸುವುದು | ಹೌದು/ಇಲ್ಲ | |
| 2 | ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲಾಗಿದೆಯೇ? | ಹೌದು/ಇಲ್ಲ | |
| 3 | ಸಂಘ: ಸಂಸ್ಥೆಯ ನೋಂದಣಿಯಾಗಿ (ಎರಡು) 2ವರ್ಷಗಳ ಅವಧಿ ಪೂರ್ಣಗೊಂಡಿರಬೇಕು. | ಹೌದು/ಇಲ್ಲ | |
| 4 | ಸಂಘ : ಸಂಸ್ಥೆಯ ಬೈಲಾ ಪ್ರತಿ ಸಲ್ಲಿಸಲಾಗಿದೆಯೇ | ಹೌದು/ಇಲ್ಲ | |
| 5 | ಆಡಳಿತ ಮಂಡಳಿಯ ಅಧ್ಯಕ್ಷರು ಸದಸ್ಯರುಗಳ ಪಟ್ಟಿ ಲಗತ್ತಿಸಿದೆಯೇ | ಹೌದು/ಇಲ್ಲ | |
| 6 | ಅನುದಾನ ಪಡೆಯುವ ಬಗ್ಗೆ ಸಂಸ್ಥೆಯ ನಡವಳಿ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 7 | ನಿವೇಶನಕ್ಕೆ ಸಂಬಂಧಿಸಿದಂತೆ ಋಣಭಾರ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 8 | ನಿವೇಶನಕ್ಕೆ ಸಂಬಂಧಿಸಿದಂತೆ ಖಾತಾ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 9 | ಕಟ್ಟಡ ನಿರ್ಮಾಣಕ್ಕೆ ನಗರ ಸಭೆ/ಗ್ರಾಮ ಪಂಚಾಯಿತಿ/ಪಟ್ಟಣ ಪಂಚಾಯಿತಿಯಿಂದ ಪಡೆದಿರುವ ಪರವಾನಿಗೆ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 10 | ಸರ್ಕಾರದ ಅನುದಾನವನ್ನು ಹೊರತುಪಡಿಸಿ ಬಾಕಿ ಮೊತ್ತವನ್ನು ಭರಿಸುವ ಆದಾಯದ ವಿವರಗಳನ್ನು ಲಗತ್ತಿಸಿದೆಯೇ | ಹೌದು/ಇಲ್ಲ | |
| 11 | ನಿರ್ಮಿಸಲಾದ ಸಮುದಾಯ ಭವನ/ವಿದ್ಯಾರ್ಥಿನಿಲಯವನ್ನು ರಾಜಕೀಯ ಉದ್ದೇಶಗಳಿಗೆ ಬಳಸದೆ ಇರುವ ಬಗ್ಗೆ ಮುಚ್ಚಳಿಕೆ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 12 | ಕಳೆದ ಎರಡು ವರ್ಷಗಳ ಆಡಿಟ್ ವರದಿ ಲಗತ್ತಿಸಿದೆಯೇ | ಹೌದು/ಇಲ್ಲ | |
| 13 | ಪ್ರಸ್ತಾಪಿತ ಕಟ್ಟಡದ ಅಂದಾಜು ಪಟ್ಟಿಯನ್ನು ಸರ್ಕಾರದ ಸಂಸ್ಥೆಗಳ ಸಹಾಯಕ ಕಾರ್ಯಪಾಲಕ ಅಭಿಯಂತರರು/ಕಾರ್ಯಪಾಲಕ ಅಭಿಯಂತರರು ಅಥವಾ ಅಂಗೀಕೃತ ಅಭಿಯಂತರರಿಂದ ಅಥವಾ ಅಂಗೀಕೃತ ವಾಸ್ತುಶಿಲ್ಪಿಗಳಿಂದ ಅನುಮೋದಿಸಲ್ಪಟ್ಟಿರುವ ಬಗ್ಗೆ ದಾಖಲೆ ಲಗತ್ತಿಸಿದೆಯೇ? | ಹೌದು/ಇಲ್ಲ | |

| | | | |
|---|---|---|---|
| 14 | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳ ಇವರ ಸ್ಥಳ ತನಿಖಾ ವರದಿ ಲಗತ್ತಿಸಿದೆಯೇ | ಹೌದು/ಇಲ್ಲ | |
| 15 | ಸರ್ಕಾರದಿಂದ ಪಡೆಯುವ ಅನುದಾನವನ್ನು ಉದ್ದೇಶಿತ ಕಾರ್ಯಕ್ಕೆ ಮಾತ್ರ ಹಣ ಉಪಯೋಗ ಮಾಡುವ ಬಗ್ಗೆ ಮುಚ್ಚಳಿಕೆ ಪತ್ರ ಲಗತ್ತಿಸಿದೆಯೇ | ಹೌದು/ಇಲ್ಲ | |
| 16 | ಉದ್ದೇಶಿತ ಕಟ್ಟಡದ ಅಂದಾಜು ಪಟ್ಟಿಯ ಮೊತ್ತ ನಮೂದಿಸುವುದು. | | |
| 17 | ಕೋರಲಾದ ಅನುದಾನ ಮೊತ್ತ ನಮೂದಿಸಿವುದು. | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್. ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ-2 (ಪ್ರಭಾರ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 880**
**SC. 500**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ.ಎನ್. ಶ್ರೀಕಾಂತ್, ಪಿ.ಎಸ್.ಐ, ಹನೂರು ಪೊಲೀಸ್ ಠಾಣೆ, ಚಾಮರಾಜನಗರ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ತುಮಕೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಪನ್ನಿ/ಡಿಇ/4/2010 (ಓ.ಬಿ./25/2012) ದಿನಾಂಕ 07.05.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ ಅಪೀಲು/85/ಶಿಕ್ಷೆ/2012 (ಓ.ಬಿ.ಸಂಖ್ಯೆ: 51/2013-14) ದಿನಾಂಕ 25.06.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 30.10.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)68/2013-14, ದಿನಾಂಕ: 10.02.2014
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 141 ಸಿಎನ್‌ಎಸ್ 2014 ದಿನಾಂಕ: 16.10.2014

**ಪ್ರಸ್ತಾವನೆ:**

ಶ್ರೀ ಜಿ.ಎನ್. ಶ್ರೀಕಾಂತ್, ಪಿ.ಎಸ್.ಐ., ಹನೂರು ಪೊಲೀಸ್ ಠಾಣೆ, ಚಾಮರಾಜನಗರ ಜಿಲ್ಲೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಹುಲಿಯೂರು ದುರ್ಗ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನದಿಂದ ನಡೆದುಕೊಂಡ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:-**

"ಶ್ರೀ ಶ್ರೀಕಾಂತ್, ಪಿಎಸ್ಐ, ಚಾಮರಾಜನಗರ ಪೂರ್ವ ಪೊಲೀಸ್ ಠಾಣೆ ಆದ ನೀವು ಈ ಹಿಂದೆ ಕುಣಿಗಲ್ ವೃತ್ತದ ಹುಲಿಯೂರುದುರ್ಗ ಪೊಲೀಸ್ ಠಾಣೆಯಲ್ಲಿ ಕರ್ತವ್ಯವನ್ನು ನಿರ್ವಹಿಸಿರುತ್ತೀರಿ. ಆ ಸಂದರ್ಭದಲ್ಲಿ ನಿಮ್ಮ ಕರ್ತವ್ಯದ ಅವಧಿಯಲ್ಲಿ ಹುಲಿಯೂರು ದುರ್ಗ ಠಾಣಾ ಮೊ.ನ: 12/2010 ಕಲಂ 324, 504, 506(ಬಿ) ಐಪಿಸಿ ಕೇಸಿನ ತನಿಖಾ ಕ್ರಮ ಕುರಿತು ಈ ಕೆಳಕಂಡಂತೆ ಕರ್ತವ್ಯ ನಿರ್ಲಕ್ಷತನ ತೋರಿರುತ್ತೀರಿ.

1) ಹುಲಿಯೂರು ದುರ್ಗ ಠಾಣಾ ಮೊ.ನ: 12/2010 ಕಲಂ 324, 504, 506(ಬಿ) ರೆ.ವಿ. 34 ಐಪಿಸಿ ಪ್ರಕರಣವನ್ನು ನೀವು ದಿನಾಂಕ: 24.1.2010 ರಂದು ದಾಖಲು ಮಾಡಿದ್ದು, ನಂತರ ಸುಮಾರು 2 ವಾರಗಳು ಕಳೆದರೂ ಸಹ ಪ್ರಕರಣದ ಆರೋಪಿಗಳಾದ ಪ್ರಕಾಶ್ ಮತ್ತು ರಂಗಸ್ವಾಮಿ ರವರನ್ನು ದಸ್ತಗಿರಿ ಮಾಡದೇ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿರುತ್ತೀರಿ.
2) ಮೊ.ನ: 12/2010 ಕಲಂ 324, 504, 506(ಬಿ) ರೆ.ವಿ. 34 ಐಪಿಸಿ ಕೇಸಿನಲ್ಲಿನ ಆರೋಪಿಗಳಾದ ಪ್ರಕಾಶ್ ಮತ್ತು ರಂಗಸ್ವಾಮಿ ರವರುಗಳು ಗ್ರಾಮದಲ್ಲೇ ಇದ್ದು ತಿರುಗಾಡುತ್ತಿದ್ದರೂ ಸಹ ಅವರನ್ನು ದಸ್ತಗಿರಿ ಮಾಡದೇ ಮತ್ತು ಆರೋಪಿಗಳ ಪತ್ತೆಗೆ ನೀವಾಗಲೀ ನಿಮ್ಮ ಸಿಬ್ಬಂದಿಗಳಾಗಲೀ ಪತ್ತೆ ಬಗ್ಗೆ ಕ್ರಮ ಕೈಗೊಂಡ ಬಗ್ಗೆ ದಾಖಲಾತಿಗಳಾದ 1. ಪ್ರಕರಣದ ದಿನಚರಿ 2. ಠಾಣಾ ಎಸ್.ಹೆಚ್.ಡಿ 3. ಸಿಬ್ಬಂದಿ ನೋಟ್‌ಬುಕ್ 4. ಸಿಬ್ಬಂದಿ ವರದಿ ಇತ್ಯಾದಿ ದಾಖಲಾತಿಗಳಲ್ಲಿನ ಅಂಕಿ, ಅಂಶಗಳು ಪೂರಕವಾಗಿರುವುದು ಕಂಡು ಬಂದಿರುವುದಿಲ್ಲ ಇದರಿಂದಾಗಿ ಆರೋಪಿಗಳು ನ್ಯಾಯಾಲಯದಲ್ಲಿ ನಿರೀಕ್ಷಣಾ ಜಾಮೀನು ಪಡೆಯಲು ನೀವೇ ಪರೋಕ್ಷವಾಗಿ ಸಹಕರಿಸಿರುತ್ತೀರಿ.
3) ಮೊ.ನ: 12/2010 ಕಲಂ 324, 504, 506(ಬಿ) ರೆ.ವಿ. 34 ಐಪಿಸಿ ಕೇಸಿನಲ್ಲಿ ಆರೋಪಿಗಳನ್ನು ದಸ್ತಗಿರಿ ಮಾಡದೇ ನಿರಾಸ್ತಕಿ ವಹಿಸಿದ್ದರಿಂದ, ಇದನ್ನು ವಿರೋಧಿಸಿ ಹುಲಿಯೂರುದುರ್ಗ ಪೊಲೀಸ್ ಠಾಣೆಯ ಮುಂದೆ ಜಯ ಕರ್ನಾಟಕ ಸಂಘದವರು ಪ್ರತಿಭಟನೆಯನ್ನು ನಡೆಸಿದ್ದು, ಪೊಲೀಸ್ ಇಲಾಖೆಯ ಬಗ್ಗೆ ಸಾರ್ವಜನಿಕರ ಮನಸ್ಸಿನಲ್ಲಿ ಕೆಟ್ಟ ಅಭಿಪ್ರಾಯ ಮೂಡುವಂತಹ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತನದ ಕರ್ತವ್ಯ ನಿರ್ವಹಿಸಿರುತ್ತೀರಿ"

ಈ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ.ರ ಮೇಲಿನ ಆಪಾದನೆಗಳು ದೃಢಪಟ್ಟಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ನೀಡಿದ್ದು, ಸದರಿ ವರದಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರವು ಮುಂದುವರೆದ ಟಿಪ್ಪಣಿಯಲ್ಲಿ ಆರೋಪ ಸಾಬೀತಾಗಿರುವ ಕುರಿತು ಆ.ಪೊ.ಅ.ಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, 3 ತಿಂಗಳು ಕಳೆದರೂ ಸಮಜಾಯಿಷಿ ನೀಡದ ಕಾರಣ, ಜ್ಞಾಪನ ಪತ್ರವನ್ನು ಹೊರಡಿಸಿ, ಒತ್ತಾಯ ಪೂರ್ವಕವಾಗಿ ಸಮಜಾಯಿಷಿಯನ್ನು ಪಡೆದು, ಆ.ಪೊ.ಅ.ರವರ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 07.05.2012ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ 02 (ಎರಡು) ವರ್ಷಗಳ ಕಾಲ ಮುಂದೂಡಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 25.06.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರಿಗಳು ದಂಡನೆ ವಿಧಿಸಲು ನೀಡಿರುವ ಕಾರಣಗಳು ಸಮರ್ಪಕವಾಗಿರದಿರುವುದನ್ನು ಗಮನಿಸಿ ಶಿಸ್ತು ಪ್ರಾಧಿಕಾರವು ನೀಡಿರುವ ದಂಡನಾದೇಶವನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 161 ಪೊಸಿಅ 2013 ಬೆಂಗಳೂರು, ದಿನಾಂಕ: 11.11.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಎನ್. ಶ್ರೀಕಾಂತ್, ಪಿ.ಎಸ್.ಐ., ಹನೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತುಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸಿ ಸದರಿ ಆರೋಪಿತ ಅಧಿಕಾರಿಯು ಇನ್ನು ಮುಂದೆ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸುವಂತೆ ಸೂಚಿಸಿ ವಾಗ್ದಂಡನೆ (censure) ವಿಧಿಸಿ ಸರ್ಕಾರವು ಆದೇಶಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

PR. 839

## ಒಳಾಡಳಿತ ಸಚಿವಾಲಯ

**ವಿಷಯ:** ದಿ॥ ಎಸ್.ಎಸ್. ಕೋಟಿ, ಸಿಪಿಸಿ–1039, ಲೋಕಾಪುರ ಪೊಲೀಸ್ ಠಾಣೆ, ಬಾಗಲಕೋಟೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ–3/ಡಿಇ–3/2007 (ಆ.ಪು.ನಂ.161/2008) ದಿನಾಂಕ 24.05.2008
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ ಅಪೀಲು/44/ಉವ/2008 ದಿನಾಂಕ 12.01.2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 15.11.2010
4) ದಿ॥ ಎಸ್.ಎಸ್. ಕೋಟಿ, ಸಿಪಿಸಿ–1039 ಇವರ ಪತ್ನಿ ಶ್ರೀಮತಿ ಮಹಾದೇವಿ ಶೇಕರಪ್ಪ ಕೋಟಿ ಇವರ ಅರ್ಜಿ ದಿನಾಂಕ 08.07.2014
5) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)48/2012–13 ದಿನಾಂಕ 10.07.2013 ಮತ್ತು 18.07.2014
6) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 152 ಸಿಎನ್‌ಎಸ್ 2014 ದಿನಾಂಕ: 18.10.2014

**ಪ್ರಸ್ತಾವನೆ:**

ಶ್ರೀ ಎಸ್.ಎಸ್.ಕೋಟಿ, ಸಿಪಿಸಿ–1039, ಲೋಕಾಪುರ ಪೊಲೀಸ್ ಠಾಣೆ, ಬಾಗಲಕೋಟೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಹಿಂದೆ ಜಮಖಂಡಿ ಶಹರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ದುರ್ನಡತೆ, ಅತೀವ ಅಶಿಸ್ತು, ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ

**ದೋಷಾರೋಪಣೆ:–**

1. "ದಿನಾಂಕ 15.12.2006ರಂದು ರಾತ್ರಿ 19.30 ಘಂಟೆಯ ಸುಮಾರಿಗೆ ಸಾರಾಯಿ ಕುಡಿದ ಅಮಲಿನಲ್ಲಿ ಜಮಖಂಡಿ ಶಹರ ಪೊಲೀಸ್ ಠಾಣೆಗೆ ಬಂದು ಠಾಣೆಯಲ್ಲಿದ್ದ ಸಿಪಿಸಿ 1338 ಎಂಬಿ ಮಾದರ ಇವರಿಗೆ "ಏನೋ ನನಗ ಲಕ್ಕನಕೇರಿ ಇದ್ದಾಕ್ಕೆ

ಯಾರ ಅದಾರ ಅಂತಾ ಕಾಲ ಮಾಡಿ ಕೇಳಲಿಕ್ಕೆ ನೀಯಾವನೋ ___ ಮಗನ ಏ ____ ಮಲ್ಯಾ ___ ಮಗನ ನನ್ನ ಮ್ಯಾಗಿನ ಆಫೀಸರುಗಳು ನನಗೆ ಯಾರು ಅಂತಾ ಕೇಳುವುದಿಲ್ಲಾ. ನಿನ್ನೆ ಮೊನ್ನೆ ಬಂದ ನನ್ನ ಮುಂದ ಆಟ ಆಡ್ತಿಯೇನೋ. ಬಾಳ ಹುಶ್ಯಾರ ಇರಲೆ ಮಗನೆ" ಅಂತಾ ಬಾಯಿಗೆ ಬಂದಂತೆ ಒದರಾಡಿರುತ್ತೀರಿ.

2. ಈ ಕುರಿತು ಠಾಣೆಯಲ್ಲಿದ್ದ ಅಪರಾಧ ವಿಭಾಗದ ಪಿ.ಎಸ್.ಐ. ಶ್ರೀ ಸುರೇಶ ಬಾಬು, ಆರ್.ಬಿ.ರವರು ನಿಮಗೆ ನೀವು ಹೇಗೆಲ್ಲಾ ಮಾತಾಡಬಾರದು ಅಂತಾ ಬುದ್ಧಿವಾದ ಹೇಳಲಾಗಿ ಅವರಿಗೆ "ಏನ್ರಿ ಪಿಎಸ್ಐ ಸಾಹೇಬರೆ ನನಗೆ ಬುದ್ಧಿ ಹೇಳತೀರಿ ಯಾವ ಮಗನ ಕೈಲೇ ಹೇಳಿಸಿಕೊಂಡಿಲ್ಲಾ ನಿನ್ನಂತ ಆಫೀಸರನ್ನು ಬಾಳ ನೋಡಿನಿ ಏ ಹೋಗರಿ ನಿಮ್ಮಂತಹ ಪಿಎಸ್ಐ : ಸಿಪಿಐ : ಡಿಎಸ್‌ಪಿ : ಎಸ್‌ಪಿ ಗಳನ್ನು ಬಹಳ ನೋಡಿನಿ ನನ್ನ ____ ಕಟ್ಟಿ ನೌಕರಿ ಮಾಡಿನಿ ಯಾವ ____ ಮಗ ನೌಕರಿ ತಗಿತಾನ ಏನ್ _____ ಮಲ್ಯಾನ ನೋಡಿತ್ತೀನಿ" ಅಂತಾ ಅವಾಚ್ಯ ಶಬ್ದಗಳಿಂದ ಬೈದಾಡಿರುತ್ತೀರಿ.

3. ನೀವು ಸಾರಾಯಿ ಕುಡಿದ ಬಗ್ಗೆ ವೈದ್ಯಕೀಯ ಪರೀಕ್ಷೆಗೆ ಒಳಪಡಿಸಬೇಕೆನ್ನುವಷ್ಟರಲ್ಲಿ ಅಪರಾಧ ವಿಭಾಗದ ಪಿಎಸ್ಐ ಶ್ರೀ ಸುರೇಶಬಾಬು ಆರ್.ಬಿ. ರವರಿಗೆ "ಏ ಪಿಎಸ್ಐ ನನಗೆ ಮೆಡಿಕಲ್ ಮಾಡಸ್ತೀ ಏನೋ ಮಾಡಿಸು ಬಾ ಏನ್ ____ ಆಗತೈತಿ ಇಂತವರು ಬಹಳ ಆಗ್ಯಾರ ಡಿಎಸ್‌ಪಿ : ಎಸ್‌ಪಿ : ಡಿಜಿಪಿ ಏನ್ ಮಾಡ್ಯಾರ" ಅಂತಾ ಅನ್ನುತ್ತಾ ತಪ್ಪಿಸಿಕೊಂಡು ಹೋಗಿರುತ್ತೀರಿ.

4. ನೀವು ದಿನಾಂಕ 20.12.2006 ರಿಂದಾ 30.01.2007ರ ವರೆಗೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರ ಉಳಿದಿರುತ್ತೀರಿ.

5. ನೀವು ಪೊಲೀಸ್ ಅಧೀಕ್ಷಕರು, ಬಾಗಲಕೋಟರವರು ಹೊರಡಿಸಿದ ಅಮಾನತ್ತಿನ ಆದೇಶ ಸಂಖ್ಯೆ:ಸಿಬ್ಬಂದಿ–3/ಪಿಆರ್/ಎಮ್/4/2007 ದಿನಾಂಕ 25.01.2007ರನೇದ್ದರ ಪ್ರಕಾರ ದಿನಾಂಕ 31.01.2007ರಿಂದಾ ಅಮಾನತ್ತಿನಲ್ಲಿದ್ದು, ಅಮಾನತ್ತಿನ ಆದೇಶದಲ್ಲಿ ನಮೂದಿಸಿದಂತೆ ಕಿಟ್ಟ ಸಾಮಗ್ರಿಗಳನ್ನು ಪೊಲೀಸ್ ಠಾಣೆಯಲ್ಲಿ ಜಮಾ ಮಾಡಲು ವಿಫಲರಾಗಿ ಮೇಲಾಧಿಕಾರಿಗಳ ಆದೇಶ ಅಮಾನ್ಯ ಮಾಡಿರುತ್ತೀರಿ.

6. ನೀವು ಪೊಲೀಸ್ ಅಧೀಕ್ಷಕರು, ಬಾಗಲಕೋಟರವರು ಹೊರಡಿಸಿದ ಅಮಾನತ್ತಿನ ಆದೇಶ ಸಂಖ್ಯೆ: ಸಿಬ್ಬಂದಿ–3/ಪಿಆರ್/ಎಮ್/4/2007 ದಿನಾಂಕ 25.01.2007ರಲ್ಲಿ ನಮೂದಿಸಿದಂತೆ ಪೊಲೀಸ್ ಅಧೀಕ್ಷಕರು, ಬಾಗಲಕೋಟರವರ ಲಿಖಿತ ಅನುಮತಿ ಪಡೆಯದೆ ಕೇಂದ್ರ ಸ್ಥಾನ ಬಿಟ್ಟು ಹೊರಗಡೆ ಹೋಗಿ ಮೇಲಾಧಿಕಾರಿಗಳ ಆದೇಶ ಅಮಾನ್ಯ ಮಾಡಿರುತ್ತೀರಿ.

ಈ ಬಗ್ಗೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ.ರವರ ವಿರುದ್ಧದ ಎಲ್ಲಾ ಆರೋಪಗಳು ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ಅಭಿಪ್ರಾಯ ಪಟ್ಟಿದ್ದು, ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಸಮಜಾಯಿಷಿ ಪಡೆದು, ಸದರಿಯವರ ಸಮಜಾಯಿಷಿಯನ್ನು ಒಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 24.05.2008ರ ಆದೇಶದಲ್ಲಿ ಇವರು ಸದ್ಯ ಪಡೆಯುತ್ತಿರುವ ಕಾಲಿಕ ವೇತನ ಶ್ರೇಣಿಯಲ್ಲಿನ 2 ಹಂತಗಳನ್ನು ಅಂದರೆ ರೂ.6,650–00 ರಿಂದ ರೂ.6,375–00ಗೆ ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ 3 (ಮೂರು) ವರ್ಷಗಳ ಕಾಲ ಕೆಳಗಿಳಿಸಿ, ಇವರು ದಿನಾಂಕ 20.12.2006ರಿಂದ 30.01.2007ರವರೆಗೆ 42 ದಿನ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರು ಉಳಿದ ಅವಧಿಯನ್ನು ಕೆ.ಸಿ.ಎಸ್. ನಿಯಮ 106(ಎ) ಪ್ರಕಾರ ವೇತನ ರಹಿತ ರಜೆ ಎಂದು ಮತ್ತು ಅವರ ಅಮಾನತ್ತಿನ ಅವಧಿ ದಿನಾಂಕ 31.01.2007ರಿಂದ ದಿನಾಂಕ 29.06.2007ರವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾದ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 12.01.2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ದಿನಾಂಕ 15.11.2010ರಂದು ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ತದನಂತರ ಮೇಲೆ ಓದಲಾದ (5)ರ ದಿನಾಂಕ 10.07.2013ರ ಪತ್ರದಲ್ಲಿ ಪರಿಷ್ಕರಣ ಮೇಲ್ಮನವಿದಾರರು ದಿನಾಂಕ 10.09.2011ರಂದು ಮೃತಪಟ್ಟಿರುವುದಾಗಿ ತಿಳಿಸಿದ್ದು, ಈ ಹಿನ್ನೆಲೆಯಲ್ಲಿ ದಿವಂಗತರ ಪತ್ನಿಯಾದ ಶ್ರೀಮತಿ ಮಹಾದೇವಿ ಶೇಕರಪ್ಪ ಕೋಟಿ ಇವರಿಂದ ಮೇಲೆ ಓದಲಾದ (4)ರ ದಿನಾಂಕ 08.07.2014ರಂದು ಅರ್ಜಿಯನ್ನು ಪಡೆಯಲಾಗಿದೆ.

ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಪರಿಷ್ಕರಣ ಮೇಲ್ಮನವಿದಾರರು ದಿನಾಂಕ 10.09.2011ರಂದು ನಿಧನ ಹೊಂದಿರುತ್ತಾರೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ / ನೌಕರರು ಸಹೋದ್ಯೋಗಿ ಮೇಲಾಧಿಕಾರಿಗಳೊಡನೆ ಅವಾಚ್ಯ ಶಬ್ದಗಳಲ್ಲಿ ಮಾತನಾಡಿರುವುದು, ವೈದ್ಯಕೀಯ ಪರೀಕ್ಷೆಗೆ ಒಳಪಡದೆ ಓಡಿ ಹೋಗಿರುವುದು ಇತ್ಯಾದಿ ಅತೀವ ದುರ್ನಡತೆಯಾಗಿರುತ್ತದೆ. ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯಿಂದ ಸದರಿಯವರ ಮೂಲ ವೇತನವು ರೂ.6,650/– ಇದ್ದದ್ದು, ರೂ.6,375/–ಕ್ಕೆ ಇಳಿದಿರುವುದರಿಂದ ಇವರ ಕುಟುಂಬಕ್ಕೆ ಸಲ್ಲಬೇಕಾದ ಪಿಂಚಣಿ ಇತ್ಯಾದಿಗಳು ಕಡಿಮೆಯಾಗಿ ಕುಟುಂಬದವರಿಗೆ ತೀವ್ರ ತೊಂದರೆಯಾಗುವ ಹಿನ್ನೆಲೆಯಲ್ಲಿ, ಮಾನವೀಯತೆ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಪರಿಷ್ಕರಿಸುವ ಕುರಿತಂತೆ ಓದಲಾದ (6)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 118 ಪೊಸಿಅ 2012 ಬೆಂಗಳೂರು, ದಿನಾಂಕ: 11.11.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಿ॥ ಎಸ್.ಎಸ್. ಕೋಟಿ, ಸಿಪಿಸಿ–1039, ಲೋಕಾಪುರ ಪೊಲೀಸ್ ಠಾಣೆ, ಬಾಗಲಕೋಟೆ ಇವರ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಪರಿಷ್ಕರಿಸಿ "ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ" ಎಂಬುದನ್ನು "ಮುಂಬರುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ (without cumulative effect)" ಎಂದು ಮಾರ್ಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**PR. 840**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸುರೇಶ್ ಎಸ್.ಕೆ., ಸಿಪಿಸಿ–698, ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಪಿಆರ್/129/2012 (ಓ.ಬಿ.ಸಂಖ್ಯೆ: 1549/2012) ದಿನಾಂಕ 30.08.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: 09/ಅಪೀಲು/ಸಿಬ್ಬಂದಿ–2/2012–13 (ಓ.ಬಿ.ಸಂಖ್ಯೆ: 13/2013–14) ದಿನಾಂಕ 24.04.2013
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07.10.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)66/2013–14 ದಿನಾಂಕ 09.06.2014 ಮತ್ತು 16.07.2014
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 142 ಸಿಎನ್‌ಎಸ್ 2014 ದಿನಾಂಕ: 19.09.2014

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಸುರೇಶ್, ಸಿಪಿಸಿ–698, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ, ಘೋರ ನಿರ್ಲಕ್ಷ್ಯತನ ಹಾಗೂ ಬೇಜವಾಬ್ದಾರಿತನ ಮತ್ತು ದುರ್ನಡತೆಯನ್ನು ಪ್ರದರ್ಶಿಸಿದ ಕಾರಣಗಳ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ಶ್ರೀ ಸುರೇಶ್, ಆದ ನೀವು ಬಸವನಗರ ಪೊಲೀಸ್ ಠಾಣೆಯಲ್ಲಿ ಸಿಪಿಸಿ–698, ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಯಾವುದೇ ಸರ್ಕಾರಿ ನೌಕರನು ತಾನು ರಜೆಯ ಮೇಲೆ ತೆರಳುವ ಮುನ್ನ ಸಾಕಷ್ಟು ಮುಂಚಿತವಾಗಿ ಮಂಜೂರಾತಿ ಪ್ರಾಧಿಕಾರಕ್ಕೆ ರಜೆಯನ್ನು ಕೋರಿ ಮನವಿ ಸಲ್ಲಿಸಿ, ರಜೆ ಮಂಜೂರಾತಿಯನ್ನು ಪಡೆದುಕೊಂಡು ನಂತರ ರಜೆ ಮೇಲೆ ಹೋಗಬೇಕೆಂದು ಮತ್ತು ರಜೆಯನ್ನು ಹಕ್ಕೆಂದು ಸಾಧಿಸಲಾಗದೆಂದು ಕೆ.ಸಿ.ಎಸ್. ನಿಯಮಗಳಿದ್ದಾಗ್ಯೂ ನೀವು ದಿನಾಂಕ 02.05.2012ರಿಂದ ದಿನಾಂಕ 04.05.2012ರವರೆಗೆ ಒಟ್ಟು 03 ದಿನ ಆಕಸ್ಮಿಕ ರಜೆಯನ್ನು ಪಡೆದುಕೊಂಡು ಹೋಗಿದ್ದು, ದಿನಾಂಕ 05.05.2012ರಂದು ವಾಪಸ್ ಕರ್ತವ್ಯಕ್ಕೆ ಹಾಜರಾಗಬೇಕಾದ ನೀವು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ನೀವು ಅನಾರೋಗ್ಯದ ಕಾರಣವಾಗಿ ಯಾವುದೇ ಮಾಹಿತಿಯನ್ನು ನೀಡದೇ ಹಾಗೂ ಠಾಣೆಯಿಂದ ಎಂಹೆಚ್‌ಎಸ್ ಪುಸ್ತಕವನ್ನು ಪಡೆದುಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಕೇಂದ್ರ ಸ್ಥಾನದಲ್ಲಿಯೂ ಇರದೇ, ನಿಮ್ಮ ಇರುವಿಕೆಯ ಮಾಹಿತಿಯನ್ನು ನೀಡಿರುವುದಿಲ್ಲವೆಂದು ನಿಮ್ಮ ಮೇಲಾಧಿಕಾರಿಯಾದ ಪಿ.ಎಸ್.ಐ., ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ಇವರು ಉಲ್ಲೇಖಿತ ಮನವಿಯನ್ನು ಸಲ್ಲಿಸಿದ್ದು, ಸದರಿ ವರದಿಯ ಆಧಾರದ ಮೇಲೆ ನಿಮ್ಮ ಗೈರು ಹಾಜರಿ ಅವಧಿಯು 21 ದಿನಗಳು ಮೀರಿದ್ದರಿಂದ ಪೊಲೀಸ್ ಮ್ಯಾನುಯಲ್ ಆದೇಶ 525ರ ಪ್ರಕಾರ "ಸೇವಾ ಪರಿತ್ಯಾಗಿ" ಎಂದು ಘೋಷಿಸಿ ನಿಮಗೆ ಸರ್ಕಾರಿ ಸೇವೆಗೆ ಬರುವ ಇಚ್ಛೆಯಿದ್ದಲ್ಲಿ ನೋಟೀಸ್ ತಲುಪಿದ 7 ದಿನಗಳ ಒಳಗಾಗಿ ಈ ಕಛೇರಿಯಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಿ ಹೊರಡಿಸಿದ ಸೇವಾ ಪರಿತ್ಯಾಗಿ ನೋಟೀಸ್ ಸಂಖ್ಯೆ: ಸಿಬ್ಬಂದಿ(4)/ರಜೆ/299/2006 ದಿನಾಂಕ 30.06.2012 ಅನ್ನು ಜಾರಿಗಾಗಿ ಕಳುಹಿಸಿದ್ದು, ಸದರಿ ನೋಟೀಸ್‌ನ್ನು ದಿನಾಂಕ 03.07.2012ರಂದು ಜಾರಿ ಮಾಡಿಕೊಂಡು ದಿನಾಂಕ 05.07.2012 ರಂದು ಕರ್ತವ್ಯಕ್ಕೆ ತೆಗೆದುಕೊಳ್ಳಲು ಕೋರಿಕೊಂಡಿರುತ್ತೀರಿ. ದಿನಾಂಕ 05.05.2012ರಿಂದ ದಿನಾಂಕ 03.07.2012 ರವರೆಗೆ ಒಟ್ಟು 60 ದಿನ ಕರ್ತವ್ಯಕ್ಕೆ ಗೈರು ಹಾಜರಾಗಿ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪೊಲೀಸ್ ಸಿಬ್ಬಂದಿಯಾದ ನೀವು ರಜೆ ಮಂಜೂರಾತಿ ಪಡೆಯದೇ ಠಾಣೆಯ ಕರ್ತವ್ಯಗಳಿಗೆ ಅನಧಿಕೃತವಾಗಿ ಗೈರು ಹಾಜರಾಗಿ ನಿಮ್ಮ ಆದ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನವನ್ನು ಮತ್ತು ಬೇಜವಾಬ್ದಾರಿತನ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 30.08.2012ರ ಆದೇಶದಲ್ಲಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು

ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 6 (ಆರು) ತಿಂಗಳ ಕಾಲ ಮುಂದೂಡಿ ಇವರು ಕರ್ತವ್ಯಕ್ಕೆ ಗೈರು ಹಾಜರಾದ ಅವಧಿ ದಿನಾಂಕ 05.05.2012ರಿಂದ ದಿನಾಂಕ 03.07.2012ರವರೆಗೆ ಒಟ್ಟು 60 ದಿನಗಳನ್ನು ಕೆ.ಸಿ.ಎಸ್. ನಿಯಮ 106(ಎ)ರನ್ವಯ **"ವೇತನ ರಹಿತ ರಜೆ"** ಎಂದು ಪರಿಗಣಿಸಿ ಹಾಗೂ ಹಾಲಿ ಚಾಲ್ತಿ ಶಿಕ್ಷೆ ಇದ್ದಲ್ಲಿ, ಸದರಿ ಶಿಕ್ಷೆಯು ಮುಗಿದ ತಕ್ಷಣ ಈ ಶಿಕ್ಷೆಯು ಜಾರಿಗೆ ಬರತಕ್ಕದ್ದು ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 24.04.2013ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಶ್ರೀ ಎಸ್.ಕೆ. ಸುರೇಶ್, ಸಿಪಿಸಿರವರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ಆ.ಪೊ.ಅ.ಯವರು ತಮ್ಮ ಸಮಜಾಯಿಷಿಯಲ್ಲಿ ದಿನಾಂಕ 05.05.2012ರಂದು ಪೊಲೀಸ್ ಠಾಣೆಗೆ ಬಂದು ಪಿ.ಎಸ್.ಐ. (ಕಾನೂನು ಮತ್ತು ಸುವ್ಯವಸ್ಥೆ) ಇವರನ್ನು ಸಂಪರ್ಕಿಸಿ, ಆರೋಗ್ಯ ತಪಾಸಣೆ ಪ್ರಯುಕ್ತ ತಮಗೆ ಎಂ.ಹೆಚ್.ಎಸ್. ಪುಸ್ತಕವನ್ನು ನೀಡುವಂತೆ ಕೋರಿ ಮನವಿಯನ್ನು ಸಲ್ಲಿಸಿದ್ದರೂ ಅದನ್ನು ತಿರಸ್ಕರಿಸಿರುವುದು ಕಂಡು ಬರುತ್ತದೆ. ನಂತರ ಆ.ಪೊ.ಅ.ಯು ತಂತಿ ಸಂದೇಶದ ಮೂಲಕ ಮಾಹಿತಿಯನ್ನು ಪಿ.ಎಸ್.ಐ. (ಕಾನೂನು ಮತ್ತು ಸುವ್ಯವಸ್ಥೆ) ಇವರಿಗೆ ಸಲ್ಲಿಸಿರುವ ಬಗ್ಗೆ ದಾಖಲೆಗಳು ಲಭ್ಯವಿರುತ್ತದೆ. ನಂತರ ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇಲ್ಲಿ ಅವರ ಆರೋಗ್ಯವನ್ನು ಪರೀಕ್ಷಿಸಿರುವ ಬಗ್ಗೆ ಮೆಡಿಕಲ್ ಸರ್ಟಿಫಿಕೇಟ್‌ಗಳು ಲಭ್ಯವಿರುತ್ತದೆ. ಹೀಗಿರುವಾಗ ಆ.ಪೊ.ಅ.ಯ ಗೈರು ಹಾಜರಿಯನ್ನು ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿರುವುದು ನ್ಯಾಯ ಸಮ್ಮತವಾಗಿರುವುದಿಲ್ಲ. ಒಂದು ವೇಳೆ ಅವರು ನೀಡಿರುವ ಮೆಡಿಕಲ್ ಸರ್ಟಿಫಿಕೇಟ್‌ಗಳು ಸರಿಯಲ್ಲವೆಂದು ಕಂಡು ಬಂದಲ್ಲಿ, ಈ ಪ್ರಕರಣವನ್ನು ಮೆಡಿಕಲ್ ಬೋರ್ಡ್‌ಗೆ ಕಳುಹಿಸಬೇಕಾಗಿತ್ತು. ಹಾಗೇ ಮಾಡದೇ ಆ.ಪೊ.ಅ.ಯ ಒಟ್ಟು 60 ದಿನಗಳ ಗೈರು ಹಾಜರಿಯನ್ನು ಅವರು ನೀಡಿರುವ ಮೆಡಿಕಲ್ ಸರ್ಟಿಫಿಕೇಟ್‌ಗಳನ್ನು ಪರಿಗಣಿಸದೇ ಅನಧಿಕೃತವೆಂದು ಪರಿಗಣಿಸಿ ಆದೇಶವನ್ನು ಹೊರಡಿಸಿರುವುದು ಸರಿಯಲ್ಲ. ಆದಕಾರಣ ಪರಿಷ್ಕರಣ ಮೇಲ್ಮನವಿಯನ್ನು ಪುರಸ್ಕರಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಒಇ 155 ಪೊಸಿಅ 2013 ಬೆಂಗಳೂರು, ದಿನಾಂಕ: 10.11.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುರೇಶ್ ಎಸ್.ಕೆ., ಸಿಪಿಸಿ–698, ಬಸವನಗರ ಪೊಲೀಸ್ ಠಾಣೆ, ದಾವಣಗೆರೆ ಇವರಿಗೆ ಶಿಸ್ತುಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ ದಿನಾಂಕ 30.08.2012ರ ಶಿಸ್ತು ಪ್ರಾಧಿಕಾರದ ಆದೇಶ ಹಾಗೂ ದಿನಾಂಕ 24.04.2013ರ ಮೇಲ್ಮನವಿ ಪ್ರಾಧಿಕಾರದ ಆದೇಶಗಳನ್ನು ವಜಾ ಮಾಡಿ ಆ.ಪೊ.ಅ.ಯನ್ನು ನಿರ್ದೋಷಿಯೆಂದು ಘೋಷಿಸಿ ಸದರಿಯವರ ದಿನಾಂಕ 05.05.2012ರಿಂದ ದಿನಾಂಕ 03.07.2012ರವರೆಗೆ ಒಟ್ಟು 60 ದಿನಗಳ ಗೈರು ಹಾಜರಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ.ಡಿ. ಮಧುಚಂದ್ರ ತೇಜಸ್ವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**PR. 842**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಎಸ್ ಪಾರ್ವತಮ್ಮ, ಮ.ಪಿ.ಎಸ್.ಐ., ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಠಾಣೆ, ತುಮಕೂರು ಜಿಲ್ಲೆ ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಜ್ಞಾಪನಾ ಪತ್ರ ಸಂಖ್ಯೆ: 110/ಸಿಬ್ಬಂದಿ(2)/22012 (ಓ.ಬಿ.ಸಂಖ್ಯೆ: 165/2012) ದಿನಾಂಕ 28.08.2012
2) ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/109/ಶಿಕ್ಷೆ/2012 (ಓ.ಬಿ.ಸಂಖ್ಯೆ: 160/2012–13) ದಿನಾಂಕ 21.02.2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 23.07.2013
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)52/2013–14 ದಿನಾಂಕ 04.01.2014
5) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 257 ಸಿಎನ್‌ಎಸ್ 2013 ದಿನಾಂಕ: 21.04.2014 ಮತ್ತು 19.09.2014

**ಪ್ರಸ್ತಾವನೆ:**

ಶ್ರೀಮತಿ ಎಸ್. ಪಾರ್ವತಮ್ಮ, ಮ.ಪಿ.ಎಸ್.ಐ., (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಇವರು ಈ ಹಿಂದೆ ಹುಳಿಯೂರು ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಮೇಲಾಧಿಕಾರಿಗಳ ಅನುಮತಿ ಪಡೆಯದೇ, ಠಾಣಾ ದಿನಚರಿಯಲ್ಲಿ ಮಾನ್ಯ ಎಸ್.ಪಿ. ಸಾಹೇಬರ ಮೌಖಿಕ ಅನುಮತಿ ಪಡೆದು, ಖಾಯಿಲೆ ರಜೆ ಹೋಗುತ್ತಿದ್ದೇನೆ ಎಂದು ಸುಳ್ಳು ಮಾಹಿತಿ ನಮೂದಿಸಿ ಕರ್ತವ್ಯಕ್ಕೆ ದಿನಾಂಕ 05.01.2012ರಿಂದ 04.02.2012ರವರೆಗೆ 31 ದಿನಗಳು ಗೈರುಹಾಜರಾದ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 28.08.2012ರ ಜ್ಞಾಪನದಲ್ಲಿ ಸದರಿಯವರ ದಿನಾಂಕ 05.01.2012ರಿಂದ 04.02.2012ರವರೆಗಿನ 31 ದಿನಗಳ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 106(ಎ)ರನ್ವಯ ಸಂಬಳ ರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿರುತ್ತಾರೆ.

ಶಿಸ್ತು ಪ್ರಾಧಿಕಾರದ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21.02.2014ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 107ರಲ್ಲಿ ಯಾವುದೇ ರಜೆಯನ್ನು ಪಡೆಯುವುದು ಸರ್ಕಾರಿ ನೌಕರರು ತಮ್ಮ ಹಕ್ಕೆಂದು ಭಾವಿಸುವಂತಿಲ್ಲ. ಆದರೆ ಸದರಿ ರಜೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಸಕ್ಷಮ ಪ್ರಾಧಿಕಾರವು ಹೊಂದಿರುತ್ತದೆ. ಅದೇ ರೀತಿಯಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106(ಎ)ರಡಿಯಲ್ಲಿ ಸಕ್ಷಮ ಪ್ರಾಧಿಕಾರವು ನೌಕರರು ರಜೆ ಮೇಲೆ ತೆರಳಿರುವುದು ತಮ್ಮ ನಿಯಂತ್ರಣಕ್ಕೆ ಮೀರಿರುವುದು ಎಂದು ಭಾವಿಸಿದಲ್ಲಿ ಮಾತ್ರ ಅಂತಹ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲು ಅವಕಾಶವನ್ನು ನೀಡಿದೆ. ಆ.ಪೊ.ಅ.ರವರು ದಿನಾಂಕ 05.01.2012ರಲ್ಲಿ ವೈದ್ಯಕೀಯ ಕಾರಣಗಳ ಮೇಲೆ ರಜೆ ಮಂಜೂರಾತಿಗೆ ರಜಾ ಅರ್ಜಿ ಸಲ್ಲಿಸಿರುವುದರಿಂದ ಹಾಗೂ ಸದರಿಯವರ ಆರೋಗ್ಯ ಸೂಕ್ಷ್ಮ ಹಾಗೂ ಗಂಭೀರ ರೀತಿಯಲ್ಲಿ ಹದಗೆಟ್ಟಿದ್ದ ಕಾರಣಗಳ ಹಿನ್ನೆಲೆಯಲ್ಲಿ ಆ.ಪೊ.ಅ.ರವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 16 ಪೊಸಿಅ 2014 ಬೆಂಗಳೂರು, ದಿನಾಂಕ: 05.11.2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಎಸ್ ಪಾರ್ವತಮ್ಮ, ಮ.ಪಿ.ಎಸ್.ಐ., ಅಬಕಾರಿ ಮತ್ತು ಲಾಟರಿ ನಿಷೇಧ ದಳ, ಶಿರಾ ಠಾಣೆ, ತುಮಕೂರು ಜಿಲ್ಲೆ ಇವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ವೈದ್ಯಕೀಯ ಕಾರಣಗಳ ಮೇಲಿನ ರಜೆಯೆಂದು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

**PR. 843**

## ಒಳಾಡಳಿತ ಸಚಿವಾಲಯ

**ವಿಷಯ:** ಕಾರಾಗೃಹ ಇಲಾಖೆಯ ವಾರ್ಡರ್ ಸಿಬ್ಬಂದಿಗಳಿಗೆ ಕಾಲಾನುಕಾಲಕ್ಕೆ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರ ಪತ್ರ ಸಂಖ್ಯೆ: ಇ4/ಸಿಆರ್-60/2013-14 ದಿನಾಂಕ: 03-04-2013 ಮತ್ತು ಇತ್ತೀಚಿನ ಪತ್ರ ದಿ: 09-04-2014.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಕಾರಾಗೃಹಗಳ ಇಲಾಖೆಯಲ್ಲಿ ಒಟ್ಟು ಮಂಜೂರಾದ 1233 ಖಾಯಂ ಹಾಗೂ 06 ತಾತ್ಕಾಲಿಕ ವಾರ್ಡರ್ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಮನೋಸ್ಥೈರ್ಯ ಹೆಚ್ಚಿಸಿ ಉತ್ತಮ ಸೇವೆ ಸಲ್ಲಿಸಲು ಅವಕಾಶ ನೀಡುವ ದೃಷ್ಟಿಯಿಂದ ಇಲಾಖೆಯಲ್ಲಿ 18 ವರ್ಷಗಳ ಕಾಲ ವಾರ್ಡರ್ ಆಗಿ ಕಾರ್ಯ ನಿರ್ವಹಿಸುತ್ತಿರುವವರಿಗೆ ಹೆಡ್ ವಾರ್ಡರ್ ಆಗಿ ಮುಂಬಡ್ತಿ ನೀಡಲು 73 ವಾರ್ಡರ್ ಹುದ್ದೆಗಳನ್ನು ಹೆಡ್ ವಾರ್ಡರ್ ಹುದ್ದೆಗಳಾಗಿ ಉನ್ನತೀಕರಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 77 ಪಿಆರ್‌ಇ 2013 ಬೆಂಗಳೂರು, ದಿನಾಂಕ: 03-12-2014.**

ಕಾರಾಗೃಹಗಳ ಇಲಾಖೆಯ 1233 ಖಾಯಂ ಹಾಗೂ 06 ತಾತ್ಕಾಲಿಕ ವಾರ್ಡರ್ (ವೇತನ ಶ್ರೇಣಿ ರೂ. 11,600-21,000) ಸಿಬ್ಬಂದಿಗಳಿಗೆ ಮುಂಬಡ್ತಿ ನೀಡಲು ಅವಕಾಶವಾಗುವಂತೆ 73 ಹೆಡ್ ವಾರ್ಡರ್ (ವೇತನ ಶ್ರೇಣಿ ರೂ. 12,500-24,000) ಹುದ್ದೆಗಳನ್ನು ಕೆಳಕಂಡ ಷರತ್ತಿಗೊಳಪಟ್ಟು ಉನ್ನತೀಕರಿಸಲು ಮಂಜೂರಾತಿ ನೀಡಿದೆ:-

1. ಯಾವುದೇ ಕಾರಣಕ್ಕೂ ಉನ್ನತೀಕರಿಸಿದ ವಾರ್ಡರ್ ಹುದ್ದೆಗಳನ್ನು ಮರು ಸೃಷ್ಟಿಸಲು ಪ್ರಸ್ತಾವನೆ ಸಲ್ಲಿಸಬಾರದು.
2. ವಾರ್ಡರ್ ಮತ್ತು ಹೆಡ್ ವಾರ್ಡರ್‌ಗಳ ಎರಡು ವೃಂದಗಳ ಒಟ್ಟು ಬಲದಲ್ಲಿ ಯಾವುದೇ ಹೆಚ್ಚಳವಾಗಬಾರದು.
3. ಈ ಹುದ್ದೆಗಳಲ್ಲಿ ವೃಂದಬಲಕ್ಕೆ ಸೇರಿಸಿ ವೃಂದ ಮತ್ತು ನೇಮಕಾತಿ ನಿಯಮಗಳ ಅನ್ವಯವೇ ಭರ್ತಿ ಮಾಡಬೇಕು, ವಿಶೇಷ ಯೋಜನೆಯೆಂದು ಪರಿಗಣಿಸಬಾರದು.
4. ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೂಕ್ತ ಅಳವಡಿಕೆ ಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 759 ಸೇ-3/2014, ದಿನಾಂಕ: 18-11-2014ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ಜೋಗೋಜಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

**PR. 918**

**SC. 100**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ (ಶ್ರೀ ಬಿ.ಹೆಚ್. ಶ್ರೀಹರ್ಷ ಇವರ ರಾಜೀನಾಮೆಯಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 195 ಎಲ್‌ಸಿಎಲ್ 2012(ಭಾ), ದಿನಾಂಕ: 10-07-2013
2. ಸರ್ಕಾರದ ಪತ್ರ ಸಂಖ್ಯೆ: ಲಾ 169 ಎಲ್‌ಸಿಎಲ್ 2013, ದಿನಾಂಕ: 11-10-2013
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ, ದಿನಾಂಕ: 21-10-2013
4. ಸರ್ಕಾರದ ಪತ್ರ ಸಂಖ್ಯೆ: ಲಾ 169 ಎಲ್‌ಸಿಎಲ್ 2013, ದಿನಾಂಕ: 19-02-2014
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ, ದಿನಾಂಕ: 04-06-2014
6. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24-02-2009
7. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24-07-2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23-07-2013
8. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 169 ಎಲ್‌ಸಿಎಲ್ 2013, ದಿನಾಂಕ: 07-07-2014

**ಪ್ರಸ್ತಾವನೆ :**

ಓದಲಾದ (1)ರ ದಿನಾಂಕ: 10-07-2013ರ ಸರ್ಕಾರದ ಆದೇಶದಲ್ಲಿ ಶ್ರೀ ಬಿ.ಹೆಚ್. ಶ್ರೀಹರ್ಷ, ನೋಟರಿ, ಚಿಕ್ಕಮಗಳೂರು ಕಂದಾಯ ತಾಲ್ಲೂಕು ಇವರ ರಾಜೀನಾಮೆಯನ್ನು ಅಂಗೀಕರಿಸಿದ್ದು, ಮೇಲೆ (2)ರಲ್ಲಿ ಓದಲಾದ ದಿನಾಂಕ: 11-10-2013ರ ಸರ್ಕಾರದ ಪತ್ರದಲ್ಲಿ ಸದರಿ ನೋಟರಿಯವರ ರಾಜೀನಾಮೆಯಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (3)ರ ದಿನಾಂಕ: 21-01-2014ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ ಇವರು ಶ್ರೀ ಬಿ.ಹೆಚ್. ಶ್ರೀಹರ್ಷ, ನೋಟರಿ ಇವರ ರಾಜೀನಾಮೆಯಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (4)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶಕರು, ಚಿಕ್ಕಮಗಳೂರು ಜಿಲ್ಲೆ ಇವರನ್ನು ದಿನಾಂಕ: 19-02-2014ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಮಗಳೂರು ಜಿಲ್ಲೆ ಇವರು ಮೇಲೆ ಓದಲಾದ (5)ರಲ್ಲಿ ದಿನಾಂಕ: 04-06-2014ರ ಪ್ರಸ್ತಾವನೆಯೊಂದಿಗೆ 21 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (6)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (7)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (8)ರ ದಿನಾಂಕ: 07-07-2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಲಾ 169 ಎಲ್‌ಸಿಎಲ್ 2013, ಬೆಂಗಳೂರು, ದಿನಾಂಕ: 30ನೇ ಅಕ್ಟೋಬರ್, 2014

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಜೆ.ಕೆ. ಸೋಮಶೇಖರ, ಸನ್ ಆಫ್ ಲೇಟ್ ಶ್ರೀ ಜೆ.ಇ. ಕೃಷ್ಣೇಗೌಡ, ಕಲ್ಲೇಶ ರೋಡ್, ಬಸವನಹಳ್ಳಿ ಎಕ್ಸ್‌ಟೆನ್‌ಷನ್, ಚಿಕ್ಕಮಗಳೂರು ಟೌನ್-577 101 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿಕ್ಕಮಗಳೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0- ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000-00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR 819**
**SC 25**

**ಜೆ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ–2)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ ಹಿರಿಯೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆ ತುಂಬುವ ಬಗ್ಗೆ (ಶ್ರೀ ಪಿ.ಬಿ. ಮುನಿಸ್ವಾಮಿ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ: ಲಾ 02 ಎಲ್‌ಸಿಎಲ್ 2014, ದಿನಾಂಕ: 22–01–2014
2. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ, ದಿನಾಂಕ: 21–03–2014
3. ಸರ್ಕಾರದ ಪತ್ರ ಸಂಖ್ಯೆ: ಲಾ 02 ಎಲ್‌ಸಿಎಲ್ 2014, ದಿನಾಂಕ: 07–04–2014
4. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ, ದಿನಾಂಕ: 10–06–2014
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24–02–2009
6. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23–07–2013
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 02 ಎಲ್‌ಸಿಎಲ್ 2014, ದಿನಾಂಕ: 25–08–2014

**ಪ್ರಸ್ತಾವನೆ :**

ಮೇಲೆ (1)ರಲ್ಲಿ ದಿನಾಂಕ: 22–01–2014ರ ಸರ್ಕಾರದ ಪತ್ರದಲ್ಲಿ (ಶ್ರೀ ಪಿ.ಬಿ. ಮುನಿಸ್ವಾಮಿ ನೋಟರಿ, ಹಿರಿಯೂರು ಕಂದಾಯ ತಾಲ್ಲೂಕು ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರನ್ನು ವರದಿ ಕೋರಲಾಗಿದ್ದು, ಅದರಂತೆ, ಓದಲಾದ (2)ರ ದಿನಾಂಕ: 21–03–2014ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಸದರಿ ನೋಟರಿಯವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (3)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರನ್ನು ದಿನಾಂಕ: 07–04–2014ರಂದು ಕೋರಲಾಗಿತ್ತು.

ಅದರಂತೆ, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿತ್ರದುರ್ಗ ಜಿಲ್ಲೆ ಇವರು ಮೇಲೆ ಓದಲಾದ (4)ರಲ್ಲಿ ದಿನಾಂಕ: 10–06–2014ರ ಪ್ರಸ್ತಾವನೆಯೊಂದಿಗೆ 23 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (5)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (6)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (7)ರ ದಿನಾಂಕ: 25–08–2014ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 02 ಎಲ್‌ಸಿಎಲ್ 2014, ಬೆಂಗಳೂರು, ದಿನಾಂಕ: 5ನೇ ನವೆಂಬರ್, 2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಸಿ.ಎಸ್. ಜಬಿವುಲ್ಲಾ ಖಾನ್ ಸನ್ ಆಫ್ ಲೇಟ್ ಸಾದತ್ ಉಲ್ಲಾಖಾನ್, ನಂ. 3000, ವಾರ್ಡ್ ನಂ. 9, ನೇಕ್ ಬೀಬಿ ದರ್ಗಾ ಪಕ್ಕ, ಜಾಮಿಯಾ ಮಸೀದಿ ಹತ್ತಿರ, ಹಿರಿಯೂರು–577 598 ಚಿತ್ರದುರ್ಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹಿರಿಯೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0– ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಲಾದ ರೂ. 1000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ

ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR 820
SC 25

**ಜಿ. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ (ಆಡಳಿತ-2)

## ಕಾರ್ಮಿಕ ಸಚಿವಾಲಯ

**ವಿಷಯ :** ಶಿವಮೊಗ್ಗ ನಗರದಲ್ಲಿ ಹೊಸದಾಗಿ 2 ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯವನ್ನು ಪ್ರಾರಂಭಿಸುವ ಕುರಿತು

**ಓದಲಾಗಿದೆ :** 1. ನಿರ್ದೇಶಕರು, ಕಾ.ರಾ.ವಿ. ಯೋಜನೆ ವೈದ್ಯಕೀಯ ಸೇವೆಗಳು, ಇವರ ಪತ್ರ ಸಂಖ್ಯೆ: ಅಭಿವೃದ್ಧಿ/ 209/2013-14, ದಿನಾಂಕ: 15-02-2014, 07-05-2014 ಮತ್ತು 13-08-2014

**ಪ್ರಸ್ತಾವನೆ :**

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (1)ರ ಪತ್ರದಲ್ಲಿ ಪ್ರಾದೇಶಿಕ ನಿರ್ದೇಶಕರು ಹಾಗೂ ಹಿರಿಯ ರಾಜ್ಯ ವೈದ್ಯಕೀಯ ಆಯುಕ್ತರು, ಕಾರ್ಮಿಕರ ರಾಜ್ಯ ವಿಮಾ ನಿಗಮ, ಬೆಂಗಳೂರು ಮತ್ತು ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ದಿನಾಂಕ: 17-01-2014ರಂದು ಶಿವಮೊಗ್ಗ ಮತ್ತು ಭದ್ರಾವತಿ ಇಲ್ಲಿಗೆ ಭೇಟಿ ನೀಡಿ, ಮಾಡಿದ್ದ ಜಂಟಿ ತಪಾಸಣಾ ವರದಿಯಲ್ಲಿ, ಶಿವಮೊಗ್ಗ ಪ್ರದೇಶದ ಕಾರ್ಮಿಕ ಸಂಘಟನೆಯ ಪದಾಧಿಕಾರಿಗಳು ಶಿವಮೊಗ್ಗದಲ್ಲಿ ಹೊಸದಾಗಿ 04 ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯಗಳನ್ನು (1) ಶಿವಮೊಗ್ಗ ಸೆಂಟ್ರಲ್, (2) ಸಾಗರ ರಸ್ತೆ ಶಿವಮೊಗ್ಗ, (3) ಎನ್.ಟಿ. ರಸ್ತೆ ಶಿವಮೊಗ್ಗ ಮತ್ತು (4) ಸವರಂಗ ರಸ್ತೆ ಶಿವಮೊಗ್ಗ ಪ್ರದೇಶಗಳಲ್ಲಿ ಪ್ರಾರಂಭಿಸುವಂತೆ ಬೇಡಿಕೆ ಸಲ್ಲಿಸಿರುತ್ತಾರೆಂದು, ಈ ಬಗ್ಗೆ ವಿವರವಾಗಿ ಚರ್ಚಿಸಿದ ನಂತರ ಶಿವಮೊಗ್ಗದ ಎನ್.ಟಿ. ರಸ್ತೆ, ಶಿವಮೊಗ್ಗ ಹಾಗೂ ಸಾಗರ ರಸ್ತೆಯಲ್ಲಿ ಚಿಕಿತ್ಸಾಲಯವನ್ನು ವಿಮಾದಾರರ ಹಿತದೃಷ್ಟಿಯಿಂದ ಪ್ರಾರಂಭಿಸುವುದು ಅಗತ್ಯವಾಗಿದೆಯೆಂಬುದಾಗಿ ತೀರ್ಮಾನಿಸಲಾಗಿದೆಯೆಂದು ವರದಿ ಮಾಡಿರುತ್ತಾರೆ.

ಪ್ರಸ್ತುತ ಶಿವಮೊಗ್ಗ ನಗರದಲ್ಲಿ 01 ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯ ಕಾರ್ಯನಿರ್ವಹಿಸುತ್ತಿದ್ದು, ಈ ಚಿಕಿತ್ಸಾಲಯಕ್ಕೆ 30,000ಕ್ಕಿಂತ ಹೆಚ್ಚಿನ ವಿಮಾದಾರರನ್ನು ಅನುಬಂಧಿಸಲಾಗಿದ್ದು, ಪ್ರತಿದಿನ 350 ರಿಂದ 400 ಹೊರ ರೋಗಿಗಳು ಹಾಜರಾಗುತ್ತಿದ್ದು, ಒಂದೇ ಚಿಕಿತ್ಸಾಲಯದ ಮುಖಾಂತರ ಶಿವಮೊಗ್ಗ ನಗರದ ವಿಮಾದಾರರಿಗೆ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಲು ಸಾಧ್ಯವಾಗುತ್ತಿಲ್ಲವೆಂದು ತಿಳಿಸಿ, ಕಾರ್ಮಿಕರ ರಾಜ್ಯ ವಿಮಾ ನಿಗಮದ ನಾರಮ್ಸ್ ಪ್ರಕಾರ 30,000ಕ್ಕಿಂತ ಹೆಚ್ಚು ವಿಮಾದಾರರನ್ನು ಹೊಂದಿರುವ ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯವನ್ನು ವಿಭಜಿಸಲು ಅವಕಾಶವಿದ್ದು, ಶಿವಮೊಗ್ಗ ನಗರದಲ್ಲಿ ಹೊಸದಾಗಿ ಕನಿಷ್ಠ 02 ಚಿಕಿತ್ಸಾಲಯಗಳನ್ನು ಪ್ರಾರಂಭಿಸುವುದರ ಮುಖಾಂತರ ಈ ವಲಯದ ವಿಮಾದಾರರಿಗೆ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸಬಹುದಾಗಿರುತ್ತದೆಯೆಂದು ವರದಿ ಮಾಡಿರುತ್ತಾರೆ.

ಕಾರ್ಮಿಕರ ರಾಜ್ಯ ವಿಮಾ ನಿಗಮದ ನಾರಮ್ಸ್ ಪ್ರಕಾರ 5,000 ದಿಂದ 10,000 ವಿಮಾದಾರರನು ಅನುಬಂಧಿಸಬಹುದಾದ ಚಿಕಿತ್ಸಾಲಯಗಳಿಗೆ ಈ ಕೆಳಕಂಡಂತೆ ಹುದ್ದೆಗಳನ್ನು ಸೃಜಿಸಲು ಅವಕಾಶವಿರುತ್ತದೆಯೆಂದು ತಿಳಿಸಿದ್ದಾರೆ :-

| ಕ್ರ.ಸಂ. | ಪದನಾಮ | 01 ಚಿಕಿತ್ಸಾಲಯಕ್ಕೆ ಮಂಜೂರು ಮಾಡಬಹುದಾದ ಹುದ್ದೆಗಳ ಸಂಖ್ಯೆ |
|---|---|---|
| 1. | ವಿಮಾ ವೈದ್ಯಾಧಿಕಾರಿಗಳು | 03 |
| 2. | ಪ್ರಥಮ ದರ್ಜೆ ಸಹಾಯಕ | 02 |
| 3. | ದ್ವಿತೀಯ ದರ್ಜೆ ಸಹಾಯಕ | 01 |
| 4. | ಶುಶ್ರೂಷಕಿಯರು | 02 |
| 5. | ಫಾರ್ಮಸಿಸ್ಟ್ | 03 |
| 6. | ಡ್ರೆಸ್ಸರ್ | 02 |
| 7. | ರೆಕಾರ್ಡ್ ಸಾರ್ಟರ್ | 02 |
| 8. | 'ಡಿ' ವರ್ಗ | 05 |
| | **ಒಟ್ಟು** | **20** |

ಮುಂದುವರೆದು, ರಾಜ್ಯ ಸರ್ಕಾರವು ಕಾರ್ಮಿಕರ ರಾಜ್ಯ ವಿಮಾ ನಿಗಮದೊಂದಿಗೆ ಮಾಡಿಕೊಂಡ ಒಪ್ಪಂದದನುಸಾರ ವಿಮಾದಾರರಿಗೆ ಹಾಗೂ ಅವರ ಕುಟುಂಬದವರಿಗೆ ಪೂರ್ಣ ಪ್ರಮಾಣದ ವೈದ್ಯಕೀಯ ಸೌಲಭ್ಯವನ್ನು ವಿಸ್ತರಿಸುವ ಹೊಣೆಗಾರಿಕೆಯನ್ನು ಹೊಂದಿದ್ದು, ಕಾರ್ಮಿಕರ ರಾಜ್ಯ ವಿಮಾ ನಿಗಮವು ದಿನಾಂಕ: 01–04–2012ರಿಂದ ಕಾರ್ಮಿಕರ ರಾಜ್ಯ ವಿಮಾ ಮಿತಿಯನ್ನು ರೂ. 1,200–00ಗಳಿಂದ ರೂ. 1,500–00ಗಳಿಗೆ ಹೆಚ್ಚಿಸಿದ್ದು, ಇದರಿಂದಾಗಿ ರಾಜ್ಯ ಸರ್ಕಾರವು ರೂ. 310 ಕೋಟಿ ವೆಚ್ಚ ಮಾಡಲು ಅವಕಾಶವಿರುತ್ತದೆಯೆಂದು ಮತ್ತು ರಾಜ್ಯ ಸರ್ಕಾರದ ತಲಾ ವಿಮಾದಾರರ ವೆಚ್ಚ ರೂ. 900–00ಕ್ಕಿಂತ ಕಡಿಮೆಯಿರುತ್ತದೆಯೆಂದು ತಿಳಿಸಿರುತ್ತಾರೆ.

ಶಿವಮೊಗ್ಗದಲ್ಲಿ ಹೊಸದಾಗಿ ಎನ್.ಟಿ. ರಸ್ತೆ ಮತ್ತು ಸಾಗರ ರಸ್ತೆಯಲ್ಲಿ 02 ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಒಟ್ಟಾರೆ 40 ಹುದ್ದೆಗಳನ್ನು ಸೃಜಿಸಬೇಕಾಗಿದ್ದು, ಇದಕ್ಕಾಗಿ ವಾರ್ಷಿಕ ರೂ. 1,05,16,440–00 ವೆಚ್ಚವಾಗುತ್ತದೆಯೆಂದು, ಇದರಲ್ಲಿ ಕಾರ್ಮಿಕರ ರಾಜ್ಯ ವಿಮಾ ನಿಗಮದ ಪಾಲು ಶೇಕಡಾ 87.50 ಅಂದರೆ ಕೇವಲ ರೂ. 92,01,885–00ಗಳಾಗಿದ್ದು, ರಾಜ್ಯ ಸರ್ಕಾರದ ಪಾಲು ಶೇಕಡಾ 12.50 ಅಂದರೆ ಕೇವಲ ರೂ. 13,14,555–00ಗಳು ಮಾತ್ರವಾಗಿರುತ್ತದೆ. ಆದ್ದರಿಂದ ರಾಜ್ಯ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುವುದಿಲ್ಲವೆಂದು ತಿಳಿಸಿ, ಶಿವಮೊಗ್ಗ ನಗರದ ವಿಮಾದಾರರ ಹಿತದೃಷ್ಟಿಯಿಂದ 02 ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯಗಳನ್ನು ಪ್ರಾರಂಭಿಸಲು ಮತ್ತು ಒಟ್ಟು 40 ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ಆದೇಶ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 126 ಎಲ್ಎಸ್ಐ 2014, ಬೆಂಗಳೂರು, ದಿನಾಂಕ: 31ನೇ ಅಕ್ಟೋಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಗೆ ಸಂಬಂಧಿಸಿದಂತೆ ಶಿವಮೊಗ್ಗ ನಗರದಲ್ಲಿ 02 ಕಾರ್ಮಿಕರ ರಾಜ್ಯ ವಿಮಾ ಚಿಕಿತ್ಸಾಲಯಗಳನ್ನು ಎನ್.ಟಿ. ರಸ್ತೆ ಮತ್ತು ಸಾಗರ ರಸ್ತೆಯಲ್ಲಿ ಹೊಸದಾಗಿ ಪ್ರಾರಂಭಿಸಲು ಹಾಗೂ ಈ ಎರಡೂ ಚಿಕಿತ್ಸಾಲಯಗಳಿಗೆ ಕೆಳಕಂಡಂತೆ ಒಟ್ಟಾರೆ 40 ಹುದ್ದೆಗಳನ್ನು (ಒಂದು ಚಿಕಿತ್ಸಾಲಯಕ್ಕೆ 20 ಹುದ್ದೆಗಳಂತೆ) ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ :–

| ಕ್ರ.ಸಂ. | ಪದನಾಮ | ಹುದ್ದೆಗಳ ಸಂಖ್ಯೆ | |
|---|---|---|---|
| | | ಪ್ರತಿ ಚಿಕಿತ್ಸಾಲಯಕ್ಕೆ | ಒಟ್ಟಾರೆ ಎರಡು ಚಿಕಿತ್ಸಾಲಯಗಳಿಗೆ |
| 1. | ವಿಮಾ ವೈದ್ಯಾಧಿಕಾರಿಗಳು | 03 | 06 |
| 2. | ಪ್ರಥಮ ದರ್ಜೆ ಸಹಾಯಕ | 02 | 04 |
| 3. | ದ್ವಿತೀಯ ದರ್ಜೆ ಸಹಾಯಕ | 01 | 02 |
| 4. | ಶುಶ್ರೂಷಕಿಯರು | 02 | 04 |
| 5. | ಫಾರ್ಮಸಿಸ್ಟ್ | 03 | 06 |
| 6. | ಡ್ರೆಸ್ಸರ್ | 02 | 04 |
| 7. | ರೆಕಾರ್ಡ್ ಸಾರ್ಟರ್ | 02 | 04 |
| 8. | ಗ್ರೂಪ್ – ಡಿ | 05 | 10 |
| | **ಒಟ್ಟು** | **20** | **40** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 466 ವೆಚ್ಚ–9/2014, ದಿನಾಂಕ: 28–10–2014ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ನಾಗೇಶ ರಾವ್,**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ (ಕಾರಾವಿ ಯೋ ವೈ. ಸೇವೆಗಳು)

PR 821
SC100

## ಸಹಕಾರ ಸಚಿವಾಲಯ

**ವಿಷಯ :** ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ಥಿಗಾಗಿ ರೂ. 700.00 ಲಕ್ಷಗಳ ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-12-2013
2. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 03-01-2014
3. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-06-2014 ಮತ್ತು 16-08-2014
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್-ಸಿಆರ್‌ಡಿ/ಕೆಎಂಈ-8/108/2014-15, ದಿನಾಂಕ: 17-09-2014

**ಪ್ರಸ್ತಾವನೆ :**

2013-14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಹೊಸ ಯೋಜನೆಯಾದ ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳು ಸ್ವಂತ ಕಟ್ಟಡವನ್ನು ಹೊಂದದೆ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕಟ್ಟಡಗಳನ್ನು ಹೊಂದಿರುವ ಸಂಘಗಳು ತಮ್ಮ ವ್ಯಾಪಾರ ವಹಿವಾಟಿಗೆ ಸಾಕಾಗದೆ ಕಟ್ಟಡದ ಕೊರತೆಯನ್ನು ಅನುಭವಿಸುತ್ತಿವೆ ಹಾಗೂ ಕಟ್ಟಡ ಹೊಂದಿರುವ ಸಂಘಗಳ ಕಟ್ಟಡದ ಸ್ಥಿತಿಗತಿ ಉತ್ತಮವಾಗಿರದೆ ದುರಸ್ಥಿಗೆ ಆರ್ಥಿಕ ಮುಗ್ಗಟ್ಟು ಎದುರಿಸುತ್ತಿರುವುದನ್ನು ಮನಗಂಡು ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ಥಿಗಾಗಿ ರೂ. 10.00 ಕೋಟಿಗಳ ಆರ್ಥಿಕ ನೆರವು ಒದಗಿಸಲು ಘೋಷಣೆ ಮಾಡಲಾಗಿತ್ತು.

ಮೇಲೆ ಓದಲಾದ (1)ರ ಆದೇಶದಲ್ಲಿ ರೂ. 300.00 ಲಕ್ಷಗಳ ಆರ್ಥಿಕ ನೆರವನ್ನು 2013-14ನೇ ಸಾಲಿನ ಪೂರಕ ಆಯವ್ಯಯದಲ್ಲಿ ಒದಗಿಸಲಾಗುವುದೆಂದು, ಕೆಲವು ಷರತ್ತುಗಳನ್ನು ವಿಧಿಸಿ ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶ ಹೊರಡಿಸಲಾಗಿತ್ತು. ಆರ್ಥಿಕ ಇಲಾಖೆ 2013-14ನೇ ಸಾಲಿನ ಮೊದಲನೇ ಪೂರಕ ಅಂದಾಜಿನಲ್ಲಿ ರೂ. 300.00 ಲಕ್ಷಗಳನ್ನು ಒದಗಿಸಿರುತ್ತದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ರೂ. 300.00 ಲಕ್ಷಗಳನ್ನು 24 ಸಹಕಾರ ಸಂಘಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (3)ರ ಆದೇಶಗಳಲ್ಲಿ 74 ಸಹಕಾರ ಸಂಘಗಳ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ತಿ ಕಾಮಗಾರಿಗಳಿಗಾಗಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ತಿಳಿಸಿರುವ 74 ಸಹಕಾರ ಸಂಸ್ಥೆಗಳಿಗೆ ಹಣ ಬಿಡುಗಡೆ ಆದೇಶವನ್ನು ಹೊರಡಿಸಬೇಕೆಂದು ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್, 2014**

ಪ್ರಸ್ತಾವೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2014-15ನೇ ಸಾಲಿನ ಪೂರಕ ಅಂದಾಜಿನಲ್ಲಿ ರೂ. 700.00 ಲಕ್ಷಗಳ ಆರ್ಥಿಕ ನೆರವನ್ನು ಒದಗಿಸಿರುವುದರಿಂದ, ಸಹಕಾರ ಸಂಘಗಳ ನಿಬಂಧಕರ ಕೋರಿಕೆಯಂತೆ ಅನುಬಂಧದಲ್ಲಿ ಲಗತ್ತಿಸಿರುವ 74 ಸಹಕಾರ ಸಂಸ್ಥೆಗಳಿಗೆ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ಥಿ ಕಾಮಗಾರಿಗಳಿಗಾಗಿ ರೂ. 700.00 ಲಕ್ಷಗಳ (ಏಳು ನೂರು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಲೆಕ್ಕ ಶೀರ್ಷಿಕೆ 2425-00-108-0-70-100 (ಯೋಜನೆ) ಧನಸಹಾಯ/ಪರಿಹಾರದಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-12-2013ರಲ್ಲಿ ಹೊಸ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ಹಳೆ ಕಟ್ಟಡಗಳ ದುರಸ್ಥಿಗಾಗಿ ವಿಧಿಸಿರುವ ಎಲ್ಲಾ ಷರತ್ತಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ. ಈ ಷರತ್ತುಗಳು ಉಲ್ಲಂಘನೆಯಾದಂತೆ ಸಹಕಾರ ಸಂಘಗಳ ಉಪನಿಬಂಧಕರು ವೈಯಕ್ತಿಕ ಮೇಲ್ವಿಚಾರಣೆಯನ್ನು ನಿಯತಕಾಲಿಕವಾಗಿ ನಡೆಸತಕ್ಕದ್ದು. ಅಂತೆಯೇ ಸಹಕಾರ ಸಂಘಗಳ ಜಂಟಿ ನಿಬಂಧಕರು ಕೂಡ ಈ ಬಗ್ಗೆ ತಪಾಸಣೆ / ಮೇಲ್ವಿಚಾರಣೆ ನಡೆಸತಕ್ಕದ್ದು. ಈ ದಿಸೆಯಲ್ಲಿ ಆದ ಪ್ರಗತಿಯನ್ನು ಕಾಮಗಾರಿ ಪ್ರಾರಂಭವಾದ ಮೂರು ತಿಂಗಳಿಗೊಮ್ಮೆ ಮರು ಸಲ್ಲಿಸತಕ್ಕದ್ದು.

ಮುಂದುವರೆದು, ಅನುಬಂಧದಲ್ಲಿ ಲಗತ್ತಿಸಿರುವ ಸಹಕಾರ ಸಂಘಗಳು ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ವಿಧಿಸಿದ ಷರತ್ತುಗಳನ್ನು ಪೂರೈಸದ ಸಹಕಾರ ಸಂಘದ ಬದಲಾಗಿ ಬೇರೆ ಸಹಕಾರ ಸಂಘವನ್ನು ನಿಬಂಧಕರು ಆಯ್ಕೆ ಮಾಡಿ ಸರ್ಕಾರದ ಅನುಮೋದನೆಯನ್ನು ಪಡೆಯುವ ಷರತ್ತಿಗೊಳಪಟ್ಟು ಕ್ರಮ ಕೈಗೊಳ್ಳಲು ಅನುಮೋದಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಕೇಂದ್ರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 313 ವೆಚ್ಚ 2/2014, ದಿನಾಂಕ: 26-09-2014ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 10–10–2014ರ ಅನುಬಂಧ**

| ಕ್ರ.ಸಂ. | ಸಹಕಾರ ಸಂಸ್ಥೆಯ ಹೆಸರು | ಉದ್ದೇಶ | ಬಿಡುಗಡೆ ಮಾಡಲಾದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|---|
| 1 | 2 | 3 | 4 |
| 1. | ಟಿಎಪಿಸಿಎಂಎಸ್, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 50.00 |
| 2. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಹಿರೇಮಗಳೂರು, ಚಿಕ್ಕಮಗಳೂರು ಜಿಲ್ಲೆ ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 3. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಮಾಸೂರು, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 4. | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಭದ್ರಯ್ಯನಹಳ್ಳಿ, ಹನೂರು ಕ್ಷೇತ್ರ, ಚಾಮರಾಜನಗರ ಜಿಲ್ಲೆ ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 02.00 |
| 5. | ಪ್ರಾ.ಕೃ.ಪತ್ತಿನ ಸಹಕಾರ ಸಂಘ ನಿ., ನಗರಂಗೆರೆ, ಚಳ್ಳಕೆರೆ ತಾಲ್ಲೂಕು ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 6. | ವ್ಯವಸಾಯ ಸೇವಾ ಸಹಕಾರ ಸಂಘ, ಮೇಣೆದಾಳ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 7. | ವ್ಯವಸಾಯ ಸೇವಾ ಸಹಕಾರ ಸಂಘ, ಬಯ್ಯಾಪುರ, ರಾಯಚೂರು ಜಿಲ್ಲೆ, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 02.00 |
| 8. | ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಬೆಕ್ಕಳಲೆ, ಮದ್ದೂರು ತಾಲ್ಲೂಕು, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 9. | ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ, ಹೊಸಗಾವಿ, ಮದ್ದೂರು ತಾಲ್ಲೂಕು ಇದರ ಕಟ್ಟಡ ವಿಸ್ತರಣೆ | ಕಟ್ಟಡ ವಿಸ್ತರಣೆ | 05.00 |
| 10. | ಪ್ರಾ.ಕೃ. ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಿ), ಇಂಡಿ ತಾಲ್ಲೂಕು ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 11. | ಕೃ. ಪತ್ತಿನ ಸಹಕಾರ ಸಂಘ, ಕ್ಯಾಲಗೊಂಡ, ಶಿಗ್ಗಾಂವ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 12. | ಕೃ. ಪತ್ತಿನ ಸಹಕಾರ ಸಂಘ, ಶಿಶುವಿನಾಳ, ಶಿಗ್ಗಾಂವ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 13. | ಕೃ. ಪತ್ತಿನ ಸಹಕಾರ ಸಂಘ, ಹಿರೇಬಂಡಿಗೇರಿ, ಶಿಗ್ಗಾಂವ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 14. | ಟಿಎಪಿಸಿಎಂಎಸ್, ಶ್ರೀರಂಗಪಟ್ಟಣ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 15. | ಪಿ.ಡಿ.ಎಲ್. ಬ್ಯಾಂಕ್, ಚಾಮರಾಜನಗರ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 16. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ನಲ್ಲಿತಾಳ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 17. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ತೆಕ್ಕೂರು, ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 |
| 18. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಬೇಗಾರು, ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 |
| 19. | ಪ್ರಾ.ಕೃ.ಪತ್ತಿನ ಸಹಕಾರ ಸಂಘ, ಹೊಂಗನೂರು, ಚಾಮರಾಜನಗರ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 20. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಯಾಚೇನಹಳ್ಳಿ, ಟಿ. ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 20.00 |
| 21. | ಟಿಎಪಿಸಿಎಂಎಸ್, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 22.00 |
| 22. | ಟಿಎಪಿಸಿಎಂಎಸ್, ಕೊಳ್ಳೇಗಾಲ, ಚಾಮರಾಜನಗರ ಜಿಲ್ಲೆ ಇದರ ವ್ಯಾಪಾರ ಮಳಿಗೆ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 23. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಹಿರೇಮಾಗನೂರು, ರಾಣೆಬೆನ್ನೂರು ತಾಲ್ಲೂಕು, ಇದರ ಸುವರ್ಣ ಸಹಕಾರ ಸೌಧ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 20.00 |
| 24. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಅಗಡಿ, ಹಾವೇರಿ ಜಿಲ್ಲೆ, ಇದರ ಕಟ್ಟಡ ದುರಸ್ಥಿ | ಕಟ್ಟಡ ನಿರ್ಮಾಣ ಮತ್ತು ದುರಸ್ಥಿ | 10.00 |
| 25. | ಶ್ರೀ ಬಸವೇಶ್ವರ ಹಾಲಸಿದ್ದನಾಥ ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕೊಥಳಿ, ಚಿಕ್ಕೋಡಿ ತಾಲ್ಲೂಕು, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 08.30 |

| 1 | 2 | 3 | 4 |
|---|---|---|---|
| 26. | ಶ್ರೀ ಬಸವೇಶ್ವರ ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಯಕ್ಸಂಬಾ ತಾಲ್ಲೂಕು, ಚಿಕ್ಕೋಡಿ ತಾಲ್ಲೂಕು ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 07.30 |
| 27. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ದೊಡ್ಡರಸಿನಕೆರೆ, ಮದ್ದೂರು ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 28. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಸಬ್ಬನಹಳ್ಳಿ, ಮದ್ದೂರು ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 29. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಸಿಂಗರಾಜನಪುರ, ಚನ್ನಪಟ್ಟಣ ತಾಲ್ಲೂಕು, ಇದರ ಕಟ್ಟಡ ವಿಸ್ತರಣೆ ಮತ್ತು ದುರಸ್ಥಿ | ಕಟ್ಟಡ ನಿರ್ಮಾಣ ಮತ್ತು ದುರಸ್ಥಿ | 10.00 |
| 30. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಸಿರವಾಸೆ, ಚಿಕ್ಕಮಗಳೂರು, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 31. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಹೊನ್ನರಗಿ, ಚಿಕ್ಕೋಡಿ ತಾಲ್ಲೂಕು, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.40 |
| 32. | ಬಸವನಗುಡಿ ಸಹಕಾರ ಸಂಘ, ಬೆಂಗಳೂರು ಇದರ ಶತಮಾನೋತ್ಸವ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 20.00 |
| 33. | ಟಿಎಪಿಸಿಎಂಎಸ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 34. | ಕಾವೇರಿ ಮಹಿಳಾ ವಿವಿಧ ಉದ್ದೇಶಗಳ ಸಹಕಾರಿ ಸಂಘ ನಿಯಮಿತ, ಅಥನಿ, ಬೆಳಗಾವಿ ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 35. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕೊಪ್ಪ, ಮದ್ದೂರು ತಾಲ್ಲೂಕು | ಕಟ್ಟಡ ನಿರ್ಮಾಣ | 10.00 |
| 36. | ಪುತ್ತೂರು ಪ್ರಾ.ಸ. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಪುತ್ತೂರು ಇದರ ಕಟ್ಟಡ ನವೀಕರಣ | ಕಟ್ಟಡ ನಿರ್ಮಾಣ | 08.00 |
| 37. | ಕುದೇರು ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕುದೇರು, ಚಾಮರಾಜನಗರ ಜಿಲ್ಲೆ ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 38. | ಪಿ.ಸಿ.ಎ.ಆರ್.ಡಿ. ಬ್ಯಾಂಕ್, ಮುಳಬಾಗಿಲು, ಕೋಲಾರ ಜಿಲ್ಲೆ, ಇದರ ಮೇಲಂತಸ್ತಿನ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 39. | ಹಳಿಯಾಳ ತಾಲ್ಲೂಕಾ ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಹಳಿಯಾಳ, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 10.00 |
| 40. | ಅಕ್ಕಮಹಾದೇವಿ ಮಹಿಳಾ ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ನಿ., ಅಥಣಿ, ಬೆಳಗಾವಿ ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 41. | ಶ್ರೀ ಬಸವೇಶ್ವರ ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಸದಲಗ, ಚಿಕ್ಕೋಡಿ ತಾಲ್ಲೂಕು, ಇದರ ಸ್ವಂತ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 42. | ಶ್ರೀ ಸೇವಾಲಾಲ್ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಪಾಪನಾಶಿ ಪಾಂಡೆ, ಗದಗ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 43. | ಪ್ರಾ.ಕೃ. ಪತ್ತಿನ ಸಹಕಾರಿ ಸಂಘ ನಿ., ಬೆಳಹೋಡ, ಗದಗ ತಾಲ್ಲೂಕು, ಗದಗ ಜಿಲ್ಲೆ ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 44. | ನಾರ್ವೆ ಪ್ರಾ.ಕೃ. ಪತ್ತಿನ ಸಹಕಾರ ಸಂಘ, ನಾರ್ವೆ, ಅರೇಹಳ್ಳಿ ಹೋಬಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ ಇದರ ನೂತನ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 45. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಉಕ್ಕುಂದ, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 46. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಹಳೇಬೀಡು, ಬೇಲೂರು ತಾಲ್ಲೂಕು, ಹಾವೇರಿ ಜಿಲ್ಲೆ, ಇದರ ನೂತನ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 47. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ದೊಡ್ಡಮೇಟಿಕುರ್ಕೆ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ, ಇದರ ಗೋದಾಮು ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 48. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಹಿಟ್ಟಿನಹಳ್ಳಿ ಎಲ್.ಟಿ. ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ, ಇದರ ಕಟ್ಟಡ ಪುನರ್ ನಿರ್ಮಾಣ | ಕಟ್ಟಡ ನಿರ್ಮಾಣ | 04.00 |
| 49. | ಯಳಂದೂರು ಟಿ.ಎ.ಪಿ.ಸಿ.ಎಂ.ಎಸ್. ಕಟ್ಟಡ ಕಾಮಗಾರಿಗಳು | ಕಟ್ಟಡ ನಿರ್ಮಾಣ | 10.00 |
| 50. | ವ್ಯವಸಾಯ ಸೇವಾ ಸಹಕಾರ ಸಂಘ, ಕುಡದರಹಾಳು, ಶಿರಗುಪ್ಪ ತಾಲ್ಲೂಕು, ಬಳ್ಳಾರಿ ಜಿಲ್ಲೆ, ಇದರ ದುರಸ್ಥಿ | ಕಟ್ಟಡ ದುರಸ್ಥಿ | 05.00 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| 1 | 2 | 3 | 4 |
|---|---|---|---|
| 51. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ತಂಬ್ರಹಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಇದರ ಹೊಸ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 15.00 |
| 52. | ಪಿಕಾರ್ಡ್ ಬ್ಯಾಂಕ್, ಹಿರೇಕೆರೂರು, ಹಾವೇರಿ ಜಿಲ್ಲೆ ಇದರ ಸಭಾಂಗಣ ನಿರ್ಮಾಣ | ಕಟ್ಟಡ ನಿರ್ಮಾಣ | 5.00 |
| 53. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಅಜ್ಜಂಪುರ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 54. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಶಿವಪುರ, ಮಂಡ್ಯ ತಾಲ್ಲೂಕು, ಇದರ ಕಟ್ಟಡ ದುರಸ್ಥಿ | ಕಟ್ಟಡ ದುರಸ್ಥಿ | 05.00 |
| 55. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಅಣ್ಣೂರು, ಹೆಚ್.ಡಿ. ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ರೈತ ಭವನ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 56. | ಪ್ರಾ.ಕೃ. ಪತ್ತಿನ ಸಹಕಾರಿ ಸಂಘ, ಹಾವಡಿ, ಶೃಂಗೇರಿ ತಾಲ್ಲೂಕು, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 57. | ಕ್ರೀಡಾ ಉತ್ತೇಜನ ಹಾಗೂ ಅಭಿವೃದ್ಧಿ ಸಹಕಾರ ಸಂಘ ನಿ., ಚಂದ್ರರಗಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 58. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಕಿತ್ತೂರು, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 59. | ಪ್ರಾ.ಸ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ., ಹೊಸಪೇಟೆ, ಬಳ್ಳಾರಿ ಜಿಲ್ಲೆ, ಇದರ ರೈತ ತರಬೇತಿ ಕಟ್ಟಡಕ್ಕೆ | ಕಟ್ಟಡ ನಿರ್ಮಾಣ | 05.00 |
| 60. | ಪ್ರಾ.ಕೃ. ಪತ್ತಿನ ಸಹಕಾರ ಸಂಘ, ಹಿರೇಮಗಳೂರು, ಚಿಕ್ಕಮಗಳೂರು ಜಿಲ್ಲೆ ಇದರ ಶಾಖೆ, ಕುರುಂವಂಗಿ ಗ್ರಾಮ, ಇಲ್ಲಿ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 10.00 |
| 61. | ಪ್ರಾ.ಕೃ.ಪ.ಸ.ಸಂ. ಸೋಮಹಳ್ಳಿ, ಗುಂಡ್ಲುಪೇಟೆ, ತಾ: ಹಾಲಹಳ್ಳಿ | ಕಟ್ಟಡ ನಿರ್ಮಾಣ | 20.00 |
| 62. | ಜಿಲ್ಲಾ ಸಹಕಾರಿ ಯೂನಿಯನ್, ಚಾಮರಾಜನಗರ | ಕಟ್ಟಡ ನಿರ್ಮಾಣ | 20.00 |
| 63. | ಪ್ರಾ.ಕೃ.ಪ.ಸ.ಸಂ. ಬೈರಂಬಾಡಿ, ಗುಂಡ್ಲುಪೇಟೆ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 |
| 64. | ಜಗಳೂರು ತಾಲ್ಲೂಕು ಸಹಕಾರ ಮತ್ತು ಕೃಷಿ ಅಭಿವೃದ್ಧಿ ಬ್ಯಾಂಕ್, ದಾವಣಗೆರೆ ಜಿಲ್ಲೆ | ಕಟ್ಟಡ ನಿರ್ಮಾಣ | 10.00 |
| 65. | ಪಿ.ಎಲ್.ಡಿ. ಬ್ಯಾಂಕ್, ಹೊಸಕೋಟೆ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 |
| 66. | ಹೊನ್ನಾವರ ತಾಲ್ಲೂಕಿನ ಹೊನ್ನಾವರ ಜೇನು ಸಾಕುವವರ ಮತ್ತು ಗ್ರಾಮೀಣ ಕೈಗಾರಿಕಾ ಸಹಕಾರ ಸಂಘ, ನಿ., | ಕಟ್ಟಡ ನವೀಕರಣ | 14.00 |
| 67. | ಪ್ರಾ.ಕೃ. ಪತ್ತಿನ ಸಹಕಾರ ಸಂಘ ನಿ., ಬೋರಗಿ, ಸಿಂದಗಿ ತಾಲ್ಲೂಕು, ವಿಜಾಪುರ ಜಿಲ್ಲೆ, ಇದರ ಕಟ್ಟಡ ನಿರ್ಮಾಣ | ಕಟ್ಟಡ ನಿರ್ಮಾಣ | 05.00 |
| 68. | ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹೊಸನಗರ, ಶಿವಮೊಗ್ಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 |
| 69. | ವಿಎಸ್‌ಎಸ್‌ಎನ್, ಕೊಡ್ಲಿಪೇಟೆ, ಸೋಮವಾರಪೇಟೆ ತಾಲ್ಲೂಕು | ಕಟ್ಟಡ ನವೀಕರಣ | 08.00 |
| 70. | ವಿಎಸ್‌ಎಸ್‌ಎನ್, ಬನ್ನಿಕಲ್, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | ಕಟ್ಟಡ ದುರಸ್ಥಿ | 02.00 |
| 71. | ಟಿಎಪಿಸಿಎಂಎಸ್, ಹೊಸಕೋಟೆ | ಕಟ್ಟಡ ದುರಸ್ಥಿ | 05.00 |
| 72. | ಪ್ರಾ.ಸ.ಸಂ. ಜಡಿಗೇನಹಳ್ಳಿ, ಹೊಸಕೋಟೆ ತಾಲ್ಲೂಕು | ಕಟ್ಟಡ ದುರಸ್ಥಿ | 05.00 |
| 73. | ಪಿಎಲ್‌ಡಿ ಬ್ಯಾಂಕ್, ಮುದ್ದೇಬಿಹಾಳ, ಬಿಜಾಪುರ ಜಿಲ್ಲೆ | ಕಟ್ಟಡ ನಿರ್ಮಾಣ | 12.00 |
| 74. | ಟಿಎಪಿಸಿಎಂಎಸ್, ಕೆ.ಆರ್. ನಗರ ಮೈಸೂರು | ಕಟ್ಟಡ ದುರಸ್ಥಿ | 05.00 |

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

**PR 826**
**SC 100**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59